## 'ಸಿದ್ಧಗಂಗಾಶ್ರೀ ಬಗೆಗೆ...'

"ಸಿದ್ಧಗಂಗಾಶ್ರೀ" ಬೃಹತ್ ಸಂಭಾವನಾ ಸಂಪುಟ ಅಭಿಮಾನವನ್ನು ಉಕ್ಕಿಸುವ ಮಹತ್ವಪೂರ್ಣವಾದ ಗ್ರಂಥ. ಈ ಬೃಹದ್ಗ್ರಂಥದ ಪುಟಗಳನ್ನು ತಿರುಗಿ ತಿರುಗಿ ತಿರುಗಿ ನೋಡವುದೇ ಒಂದು ಆನಂದದ ವಿಷಯವಾಗಿದೆ. ನಾನು ಈ ಆನಂದವನ್ನು ಗ್ರಂಥ ಕೈ ಸೇರಿದಾಗಿನಿಂದ ದಿನದಿನವೂ ಅನುಭವಿಸುತ್ತಿದ್ದೇನೆ. ಕವಿತೆಗಳು ಸವಿಸವಿಗಳನ್ನು ಸೂಸಿಬಂದಿವೆ. ಕ್ಷೇತ್ರಶ್ರೀ, ದರ್ಶನಶ್ರೀ, ಸಾಹಿತ್ಯಶ್ರೀ, ಕಲಾಶ್ರೀ, ಇವು ನಿಜಕ್ಕೂ ಗ್ರಂಥಕ್ಕನುಗುಣವಾದ ಹೆಸರುಗಳು. ಪರಿಸರ ದೃಷ್ಟಿಯಿಂದ ಚರಿತ್ರೆಯ ದೃಷ್ಟಿಯಿಂದ ಸಂಸ್ಕೃತಿಯ ದೃಷ್ಟಿಯಿಂದ ಸೌಂದರ್ಯ ದೃಷ್ಟಿಯಿಂದ ಸಂಪೂರ್ಣತೆಯನ್ನು ಈ ಗ್ರಂಥ ಒಳಗೊಂಡು ಒಂದು ದಾಖಲೆಯನ್ನು ಸ್ಥಾಪಿಸಿದೆ. ಎಲ್ಲ ದೃಷ್ಟಿಯಿಂದ ಸಂಪಾದಕರಿಗೆ ಅಭಿನಂದನೆ ಸಲ್ಲಬೇಕು.

—ಡಾ|| ಡಿ. ಎಸ್. ಕರ್ಕಿ, ಹುಬ್ಬಳ್ಳಿ-2.

# ಸಿದ್ಧಗಂಗಾ

ಸಂಪುಟ–೧೮ ಸಂಚಿಕೆ-೧೧ ನವಂಬರ್, ೧೯೮೩

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥



ನಡೆ ಶುಚಿ, ನುಡಿ ಶುಚಿ, ತನು ಶುಚಿ
ಮನ ಶುಚಿ, ಭಾವ ಶುಚಿ
ಇಂತೀ ಪಂಚತೀರ್ಥಂಗಳನೊಳಕೊಂಡು
ಮರ್ತ್ಯದಲ್ಲಿ ನಿಂದ ನಿಮ್ಮ ಶರಣರ ತೋರಿ
ಎನ್ನನುಳುಹಿಕೊಳ್ಳಾ
ಚೆನ್ನಮಲ್ಲಿಕಾರ್ಜುನಾ !

—ಅಕ್ಕಮಹಾದೇವಿ

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1982 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿ ಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಶ್ರೀ ರಾಮಕೃಷ್ಣ ಪರಮಹಂಸರು ಒಮ್ಮೆ ಅಸ್ವಸ್ಥರಾಗಿದ್ದರು. ಪರೀಕ್ಷೆ ಮಾಡಿಸಲು ದವಾಖಾನೆಗೆ ಹೋದರು. ಆಗಲ್ಲಿ ವೈದ್ಯರಿರಲಿಲ್ಲ. ಪರಿಚಾರಕ ಮಾತ್ರ ಇದ್ದ. ದುಡ್ಡು ಕೊಟ್ಟು ಅವನಿಂದಲೇ ಔಷಧ ಪಡೆದು ಆಶ್ರಮದ ಕಡೆ ಹೊರಟರು. ಆಗವರಿಗೆ ಕಣ್ಣುಗಳೇ ಕಾಣಿಸದಾದವು. ಆದರೆ ಪರಮ ಜ್ಞಾನಿಗಳಾದ ಅವರಿಗೆ ಅದಕ್ಕೆ ಕಾರಣ ಕೂಡಲೇ ಹೊಳೆಯಿತು. 'ಔಷಧಿಯ ಒಡೆಯನು ಇಲ್ಲದಿರುವಾಗ ಔಷಧಿ ಪಡೆದು ಬಂದದ್ದು ತಪ್ಪು. ಅದು ಕಳ್ಳತನ' ಎಂದುಕೊಂಡು ವಾಪಸ್ಸು ಹೋಗಿ ಆ ಔಷಧಿಯನ್ನು ಕೊಟ್ಟುಬಿಟ್ಟು ಹೊರಟರು. ಅವರಿಗಾಗ ಮೊದಲಿನಂತೆ ದೃಷ್ಟಿ ಸಂಪತ್ತು ದೊರೆಕೊಂಡಿತು. ಇದೊಂದು ಸಣ್ಣ ದೃಷ್ಟಾಂತ. ಈ ಕಥಾ ದೃಷ್ಟಾಂತ ಏನೇ ಇರಲಿ ಒಡೆಯನಿಲ್ಲದಾಗ ಹೇಳದೇ ಕೇಳದೇ ತರುವುದೂ ಕಳ್ಳತನವೇ ಸರಿ ಎಂಬುದು ಗಮನೀಯಾಂಶ. ಇದನ್ನೇ ಬಸವಣ್ಣನವರು 'ಕಳಬೇಡ, ಕೊಲಬೇಡ....' ಎಂಬ ವಚನದಲ್ಲಿ ಅವುಗಳ ಅರ್ಥವನ್ನು ಮನ–ಮಾತು–ಮಾಟ ಎಂಬ ದೃಷ್ಟಿಯಲ್ಲಿ ಪರಿಭಾವಿಸಬೇಕೆಂದಿದ್ದಾರೆ.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್.ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕ ಮಂಡಲಿ

ಪಂ॥ ಚನ್ನಪ್ಪ ಎರೇಸೀಮೆ

ಪಿ. ಎಸ್. ಚಂದ್ರಶೇಖರಯ್ಯ

ಬಸವರಾಜು

ಎಂ. ರೇಣುಕಾರಾಧ್ಯ

ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ 15-00 ರೂ

ಆಜೀವ ಸದಸ್ಯತ್ವ 151-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104

ತುಮಕೂರು ಜಿಲ್ಲೆ.

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಆಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

ಕನ್ನಡ ರಾಜ್ಯೋತ್ಸವವನ್ನು ಕಳೆದ ಕಾಲು ಶತಮಾನದಿಂದಲೂ ತಪ್ಪದೆ ಆಚರಿಸುತ್ತಾ ಬಂದಿದ್ದೇವೆ. ಒಂದು ಎರಡು ತಿಂಗಳುಗಳ ಮುಂಚಿತವಾಗಿಯೇ ಉತ್ಸವ ಆಚರಣೆಗಳು ಸಿದ್ಧತೆಗಳು ಕೆಲವುಕಡೆ ಭರದಿಂದ ಸಾಗಿರುತ್ತವೆ. ಪರಿಣಾಮದಲ್ಲಿ ಆ ಸಭೆ ಸಮಾರಂಭಗಳು ಪ್ರಚಾರಮಾಧ್ಯಮವಾಗಿ ಮುಕ್ತಾಯವಾಗುತ್ತವೆ. ಫಲಕಾರಿಯಂತೂ ಸೊನ್ನೆ. ಉತ್ಸವದ ನೆಪದಲ್ಲಿ ಹಣಗಳಿಕೆ ಕೆಲವುಕಡೆ ನಡೆಯುತ್ತದೆ. ಈ ಸಮಾರಂಭದ ಪುರುಷಾರ್ಥ, ಪ್ರಚಾರಪ್ರಿಯತೆ. ಇಂತಹ ಆಚರಣೆ ಅರ್ಥವಿಲ್ಲದ್ದು. ಈ ಆಚರಣೆ ಪರಿಣಾಮಕಾರಿಯಾಗಬೇಕು ಹಾಗೂ ರಚನಾತ್ಮಕವಾಗಿರಬೇಕು. ಉತ್ಸವ ಆಚರಣೆಯ ಸಂದರ್ಭದಲ್ಲಿ ಕೆಲವು ಪ್ರಾಯೋಗಿಕ ಯೋಜನೆಗಳನ್ನು ರೂಪಿಸಿಕೊಂಡು ಆ ವರ್ಷದ ಅಂತ್ಯದ ವೇಳೆಯಲ್ಲಿ ಅಂದರೆ ಮುಂದಿನ ಉತ್ಸವ ಆಚರಿಸುವ ಹೊತ್ತಿಗೆ ನಮ್ಮ ಯೋಜನೆಗಳು ಪೂರ್ಣವಾಗಿ ಫಲಪ್ರದವಾಗಬೇಕು. ಹಾಗಾಗದೆ ವೇದಿಕೆಯ ಘೋಷಣೆಗಳಾಗಿ ಉಳಿದಿವೆ ಇಂದು. ಯಾವ ಯೋಜನೆಗಳೇ ಆಗಲಿ ಸಾರ್ಥಕಗೊಳ್ಳಬೇಕಾದರೆ ಯೋಜನೆಯನ್ನು ರೂಪುಗೊಳಿಸುವ ಮತ್ತು ಅನುಷ್ಠಾನಕ್ಕೆ ತರುವ ಇಬ್ಬರಲ್ಲೂ ಕೆಲವು ವಿಶಿಷ್ಟ ಗುಣಗಳಿರುವುದು ಅಗತ್ಯ. ನಾಡನುಡಿಯ ಬಗ್ಗೆ ಅತ್ಯಂತ ಕಳಕಳಿ ಮತ್ತು ಆತ್ಮೀಯ ಅಭಿಮಾನವಿರಬೇಕು. ಭಾಷೆಯ ಬಗ್ಗೆ ಪೂರ್ಣ ಪಾಂಡಿತ್ಯವಿರಬೇಕು. ಒಂದು ವೇಳೆ ಪೂರ್ಣ ಪಾಂಡಿತ್ಯವಿಲ್ಲದಿದ್ದರೂ ಭಾಷಾ ಗೌರವವನ್ನು ಕಾಪಾಡುವ ತಿಳುವಳಿಕೆಯಾದರೂ ಇರಬೇಡವೆ? ತಮ್ಮ ಭಾಷೆಯನ್ನು ಬೆಳೆಸಬೇಕೆಂಬ ಹಂಬಲದ ಜೊತೆಗೆ ಸಮಾಜದ ಎಲ್ಲ ಜ್ಞಾನ ಪ್ರಕಾರಗಳಲ್ಲಿಯೂ ಬಳಕೆಯಲ್ಲಿ ತರುವ ಶಕ್ತಿಸಂಪನ್ನರಾಗಿರಬೇಕು. ಮತ್ತು ತಮ್ಮತನವನ್ನು ಕಾಪಾಡಿಕೊಳ್ಳುವ ಧೈರ್ಯಮನೋಭಾವಗಳು ಎಚ್ಚರಗೊಳ್ಳಬೇಕು. ನಮ್ಮ ನೆರೆಯವರು ನಮ್ಮಮೇಲೆ ಬಿದ್ದರೂ ಎಚ್ಚರಗೊಳ್ಳದ ದೀರ್ಘನಿದ್ದೆ ನಮಗಂಟಿಕೊಂಡಿದೆ. ಈ ಮನೋಭಾವ ನಮ್ಮವರ ಮಂದ ಧೋರಣೆಯ ಪ್ರತಿಫಲ. ನಮ್ಮ ನೆರೆಯವರು ಮೇಲೆ ಬಿದ್ದರೂ ಇನ್ನೂ ನಮ್ಮ ಮನೆಯಲ್ಲಿರುವ ಅರ್ಥಾತ್ ರಾಜಧಾನಿಯಲ್ಲಿರುವವರು ನಮ್ಮಮೇಲೆ ಬೀಳುವಕಾಲ ಸನ್ನಿಹಿತವಾಗಿದ್ದರೂ ನಮ್ಮಮನೆ ನೆರೆಮನೆಯವರನ್ನ ಅರ್ಥಮಾಡಿಕೊಳ್ಳಲಾಗದ ನಮಗೆ ವಿಶ್ವದವರನ್ನು ಅರ್ಥಮಾಡಿಕೊಳ್ಳಲು ದೊಡ್ಡ ಬಾಜಾಬಜಂತ್ರಿ ಕಾರ್ಯಕ್ರಮವನ್ನು ಏರ್ಪಡಿಸಲು ಸಕಲ ಸಿದ್ಧತೆಗಳು ನಡೆಯುತ್ತಿವೆ. ತನ್ನ ಕಾಲಡಿಯ ಭೂಮಿಯನ್ನು ಹಿಡಿಯಲಾರದವನು ಆಕಾಶವನ್ನು ಹಿಡಿಯಲು ಹಂಬಲಿಸಿದಂತೆ ಹಾಸ್ಯಾಸ್ಪದವಿದು. ವಿಶ್ವಕನ್ನಡ ಸಮ್ಮೇಳನದ ಗುರಿ ಸಾಧಿಸಲು ಖರ್ಚುಮಾಡುವ ಹಣ ಮತ್ತು ಶ್ರಮದ ಅರಿವು ಆಚರಣೆಗೆ ಮುನ್ನ ತಂದುಕೊಂಡು ನಾಡುನುಡಿಯ ರಕ್ಷಣೆಗೆ ಸಹಕಾರಿಯಾದರೆ ಸಾರ್ಥಕವಾದೀತು.

# ನವನೀತ

**ಅತಿಪರಿಚಯಾದವಜ್ಞಾ ಸಂತತ ಗಮನಾದನಾದರೋ ಭವತಿ ।**
**ಮಲಯೇ ಭಿಲ್ಲಪುರಂಧ್ರೀ ಚಂದನತರುಕಾಷ್ಠಮಿಂಧನಂಕುರುತೇ ॥**

ಅತಿಯಾದ ಪರಿಚಯದಿಂದ ಅಸಡ್ಡೆಯೂ; ಯಾವಾಗಲೂ ಹೋಗುವುದರಿಂದ ಅನಾದರವು ಉಂಟಾಗುತ್ತದೆ. ಹೇಗೆಂದರೆ ಮಲಯ ಪರ್ವತದಲ್ಲಿ ಶ್ರೀಗಂಧವು ಹೆಚ್ಚಾಗಿ ದೊರೆಯುವುದರಿಂದ ಅದರ ಯೋಗ್ಯತೆಯನ್ನು ಅತಿಪರಿಚಯದಿಂದ ಅಸಡ್ಡೆಯಾಗಿ ತಿಳಿದು ಅದನ್ನು ಸೌದೆಯನ್ನಾಗಿ ಬಿಲ್ಲರ ಹೆಂಗಸರು ಉಪಯೋಗಿಸುತ್ತಾರೆ.

*　　*　　*

**ಸಂತೋಷಾಮೃತ ತೃಪ್ತಾನಾಂ ಯತ್ಸುಖಂ ಶಾಂತ ಚೇತಸಾಮ್ ।**
**ಕುತಸ್ತದ್ಧನ ಲುಬ್ಧಾನಾಂ ಇತಶ್ಚೇತಶ್ಚಧಾವತಾಮ್ ॥**

ಸಂತೋಷ ಎಂಬ ಅಮೃತದಿಂದ ತೃಪ್ತನಾದ ಶಾಂತವಾದ ಮನಸ್ಸುಳವನಿಗೆ ಯಾವ ಸುಖ ಲಭಿಸುತ್ತದೆಯೋ ಅದು ಹಣಕ್ಕೋಸ್ಕರ ಆಶೆಪಟ್ಟು ಅಲ್ಲಿ ಇಲ್ಲಿ ಪರಿದಾಡುವವನಿಗೆ ಎಲ್ಲಿಂದ ಬರುತ್ತದೆ.

*　　*　　*

**ಅಯಂನಿಜಃ ಪರೋವೇತಿ ಗಣನಾ ಲಘುಚೇತಸಾಮ್ ।**
**ಉದಾರಚರಿತಾನಾಂತು ವಸುಧೈವಕುಟುಂಬಕಮ್ ॥**

ಇವನು ತನ್ನವನು ಇವನು ಬೇರೆಯವನು ಎಂಬ ತಿಳುವಳಿಕೆ ಸಂಸಾರದಲ್ಲಿ ಸಿಕ್ಕಿ ತೊಳಲಾಡುವ ಮಮಕಾರ ಉಳ್ಳ ಅಲ್ಪ ಮನಸ್ಸಿನ ಮನುಷ್ಯರಲ್ಲಿ ಇರುತ್ತದೆ. ಆದರೆ ಉದಾರವಾದ ಮನಸ್ಸುಳ್ಳ ರಾಘದ್ವೇಶ ಮಮಕಾರಗಳಿಂದ ವಿಮುಖರಾದ ಉತ್ತಮ ಚಾರಿತ್ರ್ಯವುಳ್ಳವರಾದರೋ ಈ ಭೂಮಂಡಲದವರನ್ನೆಲ್ಲಾ ತನ್ನವರೆಂದು ತಿಳಿಯುತ್ತಾರೆ.

*　　*　　*

**ವೃಥಾ ವೃಷ್ಟಿಃ ಸಮುದ್ರೇಷು ವೃಥಾ ತೃಪ್ತಸ್ಯ ಭೋಜನಮ್ ।**
**ವೃಥಾ ದಾನಂ ಸಮರ್ಥಸ್ಯ ವೃಥಾ ದೀಪೋ ದಿವಾಪಿಚ ॥**

ಸಮುದ್ರದಮೇಲೆ ಮಳೆ ಬೀಳುವುದು ವ್ಯರ್ಥ; ತೃಪ್ತನಾದವನಿಗೆ ಊಟವಿಡುವುದು ವ್ಯರ್ಥ; ಸಮರ್ಥನಾದವನಿಗೆ ದಾನ ಕೊಡುವುದು ವ್ಯರ್ಥ; ಹಗಲಿನಲ್ಲಿ ದೀಪ ಉರಿಯುವುದು ವ್ಯರ್ಥ

— ಎಸ್. ಎಸ್.

# ಚಿಂತನ

—ಟಿ. ಆರ್. ಮಹದೇವಯ್ಯ

## ಭಾಷಾಭಿಮಾನ

ಪ್ರತಿಯೊಂದು ಭಾಷೆಯೂ ಅವನ್ನು ಮಾತನಾಡುವ ಜನರ ಅಂತರಂಗದ ಅಭಿವ್ಯಕ್ತಿ, ಅವರ ಬದುಕಿನ ಪ್ರತೀಕ. ಅದು ಅವರ ವಿಚಾರಗಳ ವೇಷ; ಅವರ ಭಾವನೆಗಳ ಸಾಕಾರಸ್ವರೂಪ. ಕನ್ನಡ ಭಾಷೆ ಎರಡು ಸಹಸ್ರ ವರ್ಷಗಳ ಭವ್ಯ ಇತಿಹಾಸವನ್ನುಳ್ಳ ಸಂಪದ್ಭರಿತ ಭಾಷೆ. ತನ್ನದೇ ಆದ ವೈಶಿಷ್ಟ್ಯಗಳಿಂದ, ಸ್ವಂತಿಕೆಯಿಂದ ಪ್ರಗತಿಪಥದಲ್ಲಿ ಸಾಗುತ್ತಾ ಬಂದಿದೆ. ಅನಿವಾರ್ಯವಾದ ಅನ್ಯಭಾಷಾ ಸ್ವಂಪರ್ಕ ನಮ್ಮ ಭಾಷೆಯ ಸತ್ವವನ್ನು ಕುಗ್ಗಿಸದೆ ಹಿಗ್ಗಿಸುತ್ತಲೇ ಬಂದಿದೆ. ಆದರೆ ಆಧುನಿಕ ಯುಗದಲ್ಲಿ ಅದಕ್ಕೆ ಸಾಕಷ್ಟು ಕುತ್ತು ಆತುಕೊಂಡಿದೆ. ಪರ ಭಾಷೆಯ ವ್ಯಾಮೋಹ ಒಂದು ಮಿತಿಯಲ್ಲಿದ್ದರೆ ವರ; ಅದೇ ವ್ಯಾಮೋಹವಾಗಿ ಮಾರ್ಪಟ್ಟರೆ ಅದು ಶಾಪ. ಸ್ವಾಭಿಮಾನ ಶೂನ್ಯರಾದ ಕನ್ನಡಿಗರ ಬಾಯಿಗೆ ಸಿಕ್ಕಿ ನಮ್ಮ ಭಾಷೆ ಸೊರಗುತ್ತಿದೆ. ನಾವು ಆಡುವ ಭಾಷೆಯತ್ತ ಒಮ್ಮೆ ಕಿವಿಗೊಟ್ಟರೆ ಸಾಕು ನಮಗೆ ಗೊತ್ತಾಗುತ್ತದೆ. ಅದು ಇಂಗ್ಲೀಷ್ ಅಲ್ಲ, ಕನ್ನಡವೂ ಅಲ್ಲ. ಇಂಥದೇ ಎಂದು ಹೆಸರಿಸಲಾಗದ ಚೌಚೌ ಭಾಷೆಯೊಂದು ಬಳಕೆಯಾಗುತ್ತಿದೆ. ಅನೇಕರು ಇಂಗ್ಲೀಷ್ ಪದಗಳಿಗೆ ಕನ್ನಡ ಪ್ರತ್ಯಯಗಳನ್ನು ಹಚ್ಚಿ ಲೀಲಾಜಾಲವಾಗಿ ಮಾತನಾಡುತ್ತಾರೆ. ಈ ಬೆರಕೆ ಭಾಷೆ ಮಾತನಾಡುವುದು ನಾಗರಿಕ ಲಕ್ಷಣವೆಂಬ ಭಾವನೆ ಬೆಳೆಯುವಂತಿದೆ. ಸಂಪರ್ಕಕ್ಕೆ ಒಂದು ಭಾಷೆ ಅಷ್ಟೆ. ಅದು ಇಂಥದೇಬೇಕೆಂಬ ಹಂಬಲವೇನೂ ಅದು ಶುದ್ಧವಾಗಿರಬೇಕೆಂಬ, ಅದು ನಮ್ಮದಾಗಿರಬೇಕೆಂಬ ಹಂಬಲವೇನೂ ಇದ್ದಂತಿಲ್ಲ. ವ್ಯವಹಾರದಲ್ಲಿ ಮಾತ್ರ ಇಂಥ ಭಾಷೆ ಇದೆ ಎನ್ನುವಂತಿಲ್ಲ. ಬಳಕೆಯಲ್ಲಿ ಇಂಥ ಭಾಷೆಯಿದ್ದು ಬರೆಯಲು ಕೂತಾಗ ಮಾತ್ರ ಶುದ್ಧ ಭಾಷೆ. ಭಾಷೆ ಬಾ ಎಂದರೆ ಹೇಗೆ ಬಂದೀತು? ನಮ್ಮ ಜೀವದ ಜೀವವಾದ ತಾಯ್ನುಡಿಯ ಬಗ್ಗೆ ಇರುವ ಇಂಥ ಅನಾವಸ್ಥೆಗೆ, ನಿರ್ಲಕ್ಷ್ಯಕ್ಕೆ ಏನು ಮದ್ದು?

ನಗರದ ಒಂದು ರಸ್ತೆ ಬದಿಯಲ್ಲಿ ಕಿವಿಗೆ ಬಿದ್ದ ಒಂದು ಮಾತು: ಒಬ್ಬ ಯುವಕ ಬಹುಶಃ ಯಾವುದೋ ಕಛೇರಿಯಲ್ಲಿನ ನೌಕರನಿರಬೇಕು; ಬಾಳೆಹಣ್ಣು ಮಾರುವ ಒಬ್ಬ ಸಣ್ಣ ವ್ಯಾಪಾರಿಯ ಬಳಿ ಬಂದ. ಅವನು ಕೊಳ್ಳುವುದು ಒಂದು ಬಾಳೆಹಣ್ಣು, ಇಡೀ ಚಿಪ್ಪಿಗೇ ಕೈಹಾಕಿದ. ಅದೂ ತುಂಬಾ ಒರಟಾಗಿ. ಅದಕ್ಕೆ ಆ ಬಡಪಾಯಿ ಮುದುಕ —"ಸ್ವಾಮಿ, ಹಂಗೆಲ್ಲಾ ಚಿಪ್ಪನ್ನೇ ಎತ್ತಿ ನಲುಗಿಸಬೇಡಿ, ನಾನು ಕೊಡ್ತೀನಿ" ಎಂದ.

(44 ನೇ ಪುಟನೋಡಿ)

# ಕ್ಷೇತ್ರವಾರ್ತೆ

—ಎಸ್. ಶಿವಸುಬ್ರಹ್ಮಣ್ಯ

ವಿವಿಧ ಸಂಸ್ಥೆಗಳ ಸ್ಥಾಪಕರೂ ಶ್ರೀ ಕ್ಷೇತ್ರಾಧಿಪತಿಗಳೂ ಆದ ಶ್ರೀ ಶಿವ ಕುಮಾರಮಹಾಸ್ವಾಮಿಗಳವರ ಅಪ್ಪಣೆಯ ಮೇರೆಗೆ ಶ್ರೀ ಕ್ಷೇತ್ರದಲ್ಲಿಯೇ ಇರುವ ಸನಿವಾಸ ವಿದ್ಯಾ ಸಂಸ್ಥೆಗಳು ( ) ಒಟ್ಟಿಗೆ ಸೇರಿ ಸಂಯುಕ್ತ ವಿದ್ಯಾರ್ಥಿ ಸಂಘವನ್ನ ಸ್ಥಾಪಿಸಿಕೊಂಡು ಈ ಸಂಘದ ವತಿಯಿಂದ ವಿವಿಧ ಕಾರ್ಯಕ್ರಮಗಳನ್ನ ಪ್ರತಿ ವರ್ಷದಂತೆ ಈ ವರ್ಷವೂ ನಡೆಸುತ್ತಾ ಬಂದಿದೆ. ಪ್ರತಿಯೊಂದು ಸಂಸ್ಥೆಯೂ ಕ್ರಮವಾಗಿ ಒಂದೊಂದು ವರ್ಷಕಾಲ ಈ ಸಂಘದ ಕಾರ್ಯಚಟುವಟಿಕೆಯನ್ನ ನಡೆಸಿಕೊಂಡು ಹೋಗುವ ಪರಿಪಾಠವಿದೆ. ಅದರಂತೆಯೇ ಈ ವರ್ಷದ ಈ ಸಂಘದ ಕಾರ್ಯಕ್ರಮ ಭಾರವು ಹಿರಿಯ ಪ್ರಾಥಮಿಕ ಪಾಠಶಾಲೆಯದಾಗಿದ್ದು ಸಂಚಾಲಕ ರಾದ ಎಸ್. ಚಂದ್ರಶೇಖರಯ್ಯನವರು ತಮ್ಮ ಉಪಾಧ್ಯಾಯವೃಂದ ಹಾಗೂ ವಿದ್ಯಾ ರ್ಥಿಗಳ ಸಹಕಾರದಿಂದ ಶ್ರದ್ಧೆಯಿಂದ ಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿ ರುವುದು ಎಲ್ಲರಿಗೂ ಸಂತೋಷದಾಯಕವಾದ ವಿಚಾರವಾಗಿದೆ. ಈ ಸಂಘದ ಆಶ್ರ ಯದಲ್ಲಿ ದಿನಾಂಕ 7–11–82 ನೇ ಭಾನುವಾರ ಸಂಜೆ ಆರು ಗಂಟೆಗೆ ಪ್ರಾರ್ಥನಾ ಸಭಾಂಗಣದಲ್ಲಿ ಕನ್ನಡ ರಾಜ್ಯೋತ್ಸವವನ್ನ ಶ್ರೀ ಶ್ರೀ ಗಳೀರ್ವರ ಸಮ್ಮುಖದಲ್ಲಿ ಕವಿಗಳೂ ಹೆಸರಾದಂತ ಐ.ಎ.ಎಸ್. ಆಡಳಿತಾಧಿಕಾರಿಗಳೂ ಆದ ಶ್ರೀ ಸಿದ್ದಯ್ಯ ಪುರಾಣಿಕ್‌ರವರ ಅಧ್ಯಕ್ಷತೆಯಲ್ಲಿ ಅತ್ಯಂತ ವೈಭವದಿಂದ ಆಚರಿಸಲಾಯಿತು. ಮುಖ್ಯ ಅಥಿತಿಗಳಾಗಿ ನಾಡಿನ ಹೆಸರಾಂತ ಸಾಹಿತಿಗಳೂ 54ನೇ ಅಖಿಲಭಾರತ ಕನ್ನಡಸಾಹಿತ್ಯ ಸಮ್ಮೇಳನದ ನಿಯೋಜಿತ ಅಧ್ಯಕ್ಷರೂ ಆದ ಡಾ|| ಶ್ರೀ ಗೊರೂರು ರಾಮಸ್ವಾಮಿ ಐಯ್ಯಂಗಾರ್‌ರವರು ಬಂದು ಕಾರ್ಯಕ್ರಮವನ್ನು ಯಶಸ್ವಿಯಾಗಿ ನಡೆಸಿಕೊಟ್ಟರು. ಅಧ್ಯಕ್ಷರಾದ ಶ್ರೀ ಸಿದ್ದಯ್ಯಪುರಾಣಿಕ್‌ರವರೂ ಹಾಗೂ ಅಥಿತಿ ಗಳಾದ ಗೊರೂರು ರಾಮಸ್ವಾಮಿ ಐಯ್ಯಂಗಾರ್‌ರವರು ಅಮೂಲ್ಯವಾದ ಜ್ಞಾನ ಸಂಪತ್ತಿನಿಂದ ಕೂಡಿದ ತಮ್ಮ ಭಾಷಣಗಳಲ್ಲಿ ಭಾರತದ ಭವ್ಯ ಪರಂಪರೆಯನ್ನು ಅದರಲ್ಲಿ ಕರ್ನಾಟಕದ ಸ್ಥಾನವನ್ನು ಅದರ ಸಾಂಸ್ಕೃತಿಕ ಹಿರಿಮೆ ಪ್ರಾಚೀನತೆಯನ್ನ ಹಾಗೂ ಕನ್ನಡಜನತೆಯ ಉದ್ಧಾರಕ್ಕೆ ಮುಂದೆ ಕೈಗೊಳ್ಳಬೇಕಾದ ಕಾರ್ಯಕ್ರಮದ ಬಗ್ಗೆ ಸ್ಥೂಲವಾಗಿ ವಿವರಿಸಿದರು. ಅದನ್ನ 46ನೇ ಪುಟದಲ್ಲಿ ಕೊಡಲಾಗಿದೆ.

# ಪ್ರಾಚೀನ ಕರ್ನಾಟಕದ ಕೆಲವು ಶೈಕ್ಷಣಿಕ ವಿಚಾರಗಳು

—ಎಸ್. ವಿ. ಜೀವೂರ (ರಿಟೈರ್ಡ್ ಡಿ. ಪಿ. ಐ.)

ಸಿಂಧು ಮತ್ತು ಪಂಜಾಬಗಳಲ್ಲಿರುವ ಮಹೆಂಜೊದಾರೋ, ಚನ್ಹುದಾರೊ ಮತ್ತು ಹರಪ್ಪಾಗಳ ಉತ್ಖನನಗಳಿಂದ ದ್ರಾವಿಡರು ಮತ್ತು ಅವರ ನಾಗರೀಕತೆ ಇವುಗಳ ಬಗೆಗೆ ಆಶ್ಚರ್ಯಕರ ಶೋಧಗಳಾಗಿವೆ. ಆರ್ಯರ ನಾಗರಿಕತೆಯಷ್ಟೇ ದ್ರಾವಿಡರ ನಾಗರಿಕತೆಯೂ ಸಹ ಮುಂದುವರಿದಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಕೆಲವರ ಅಭಿಪ್ರಾಯವು ಆರ್ಯರಿಗಿಂತಲೂ ದ್ರಾವಿಡರು ಮುಂದುವರಿದಿದ್ದರೆಂದಿದೆ. ಮಾರ್ಷಲ್ ಮತ್ತು ಹೆಸರಾಂತ ಇತರ ವಿದ್ವಾಂಸರು ದ್ರಾವಿಡರ ನಾಗರಿಕತೆಯು ಈಜಿಪ್ಟ ಅಥವಾ ಬಾಬಿಲೋನಿಯಾದ ನಾಗರಿಕತೆಯಷ್ಟು ಪೂರ್ವದ್ದೆಂದು ಸಿದ್ಧಪಡಿಸಿದ್ದಾರೆ. ಸಿಂಧು ನದಿಯ ಕೊಳ್ಳವು ಜಾಗತಿಕ ನಾಗರಿಕತೆಯ ಉಗಮಸ್ಥಾನವೆಂದು ತೋರಿಸಿಕೊಡಲು ಯತ್ನಿಸಿದ್ದಾರೆ. " ಆರ್ಯರ ಹೆಸರು ಕೇಳಿ ಬರುವುದಕ್ಕಿಂತ ಐದುಸಾವಿರ ವರ್ಷಗಳ ಹಿಂದೆ ಮೆಸಪಟೋಮಿಯಾ ಮತ್ತು ಈಜಿಪ್ಟ ನಾಗರಿಕತೆಗಳ ಸರಿಸಮವಾಗಿ ಅಥವಾ ಅದಕ್ಕೂ ಹೆಚ್ಚು ಮುಂದುವರಿದ ನಾಗರಿಕತೆ ಪಂಜಾಬ ಮತ್ತು ಸಿಂಧು ಪ್ರಾಂತಗಳಲ್ಲಿ ಇತ್ತೆಂದು ಯಾರೂ ಒಂದು ಕ್ಷಣಮಾತ್ರ ನಿರೀಕ್ಷಿಸಿದ್ದಿಲ್ಲ. ಅದೇ ಪ್ರಕಾರ ಮುಂದುವರಿದ ನಾಗರಿಕತೆ ಭಾರತದ ಇತರ ಭಾಗಗಳಲ್ಲಿ ಇತ್ತೋ ಅಥವಾ ಇಲ್ಲವೋ ಎಂದು ಹೇಳುವುದಕ್ಕಾಗುವುದಿಲ್ಲ[1]. ದ್ರಾವಿಡರ ಧರ್ಮ ಶೈವಧರ್ಮ. ಈ ಕೊಳ್ಳದ ಆ ಜನರು ಧರ್ಮವನ್ನು ಹೇಗೆ ಪಾಲಿಸುತ್ತಿದ್ದರೆಂದು ನಾವು ನೋಡುತ್ತೇವೆ. "ಶೈವಧರ್ಮದ ಇತಿಹಾಸವು ತಾಮ್ರ ಶಿಲಾಯುಗದವರೆಗೆ ಅಥವಾ ಅದಕ್ಕೂ ಹಿಂದೆ ಹೋಗುವುದು. ಆದುದರಿಂದ ಇದು ಜಾಗತಿಕ ನಾಗರಿಕತೆಗಳಲ್ಲಿ ಅತಿ ಪ್ರಾಚೀನ ನಾಗರಿಕತೆಯೆಂದು ಪರಿಗಣಿಸಲ್ಪಟ್ಟಿದೆ[2].

ದ್ರಾವಿಡರು ಭಾರತೀಯ ಆರ್ಯರಿಂದ ಉಗಮಹೊಂದಿದ್ದರೆಂದು "ಮ್ಯುಯಿರ್" ಅವರು ಅಭಿಪ್ರಾಯಪಡುತ್ತಾರೆ[3]. ಅವರು ಭಾರತ, ಆಫ್ರಿಕಾ, ಆಸ್ಟ್ರೇಲಿಯಾ

---

1 ಮಹೆಂಜೋದಾರೋ ಅಂಡ್ ಇಂಡೂಸ್ ಸಿವಿಲಿಜೇಷನ್ ಪ್ರಿಪೇಸ್ V, P,

2 ಇದೇ P,VII.

3 ಮುಯಿರ್ಸ್ ಸ್ಯಾಂಸ್ಕ್ರಿಟ್ ಟೆಕ್ಸ್ಟ Vol II See S. P. 422 quoted in History and Philosophy of Lingayat Religion,P.12.

ಜನಾಂಗದವರೆಂದು ಹಕ್ಸಲೇ ಅವರ ಅಭಿಮತ. ರಾಗೂರ್ಝುನ್ಸರ ಅಭಿಪ್ರಾಯ ದಂತೆ ದ್ರಾವಿಡರು ಎಲ್ಮಾಯಿಟ್ ಜನಾಂಗದವರು[4]. ಪ್ರೊ: ಜೆ. ಪೆರಿ ಅವರ ಮತ ದಂತೆ ದ್ರಾವಿಡರು ಭೂಮಧ್ಯ ಸಮುದ್ರ ಭಾಗದ ಜನಾಂಗದ ಒಂದು ಶಾಖೆ[5]. ಇದೇ ಅಭಿಪ್ರಾಯವನ್ನು ಡಾ|| ಹಾಲರು ಪುಷ್ಟೀಕರಿಸುತ್ತಾರೆ[6]. ಅವರ ಉಗಮದ ವಿಚಾರವೇನೇ ಇರಲಿ. ಆದರೆ ದ್ರಾವಿಡ ನಾಗರಿಕತೆ ಶ್ರೇಷ್ಠ ತರಗತಿಯದೆಂಬುದೂ ಮತ್ತು ಅದು ಆರ್ಯರ ನಾಗರಿಕತೆಗಿಂತ ಯಾವ ರೀತಿಯಲ್ಲಿಯೂ ಕಡಿಮೆ ಇದ್ದಿಲ್ಲ ವೆಂಬುದೂ ನಿರ್ವಿವಾದದ ಮಾತು. ಆ ಕಾರಣದಿಂದ ದ್ರಾವಿಡ, ದ್ರಾವಿಡ ಜನಾಂ ಗದ ಶಾಖೆಯವರಾದ ಕನ್ನಡಿಗರು ಖ್ಯಾತಿವೆತ್ತ ಮತ್ತು ಸುಖಮಯ ಜೀವನವುಳ್ಳವ ರಾಗಿದ್ದರು. ಅವರ ನಾಗರಿಕತೆ ಕ್ರಿಸ್ತಶಕದ ಪ್ರಾರಂಭಕ್ಕಿಂತಲೂ ಕೇಲವುಸಾವಿರ ವರ್ಷಗಳು ಪೂರ್ವದ್ದಾಗಿದೆ.

ಇಂಥ ಸಂಪತ್ತುಳ್ಳ ನಾಗರಿಕತೆಯಿದ್ದ ದ್ರಾವಿಡರು ತಮ್ಮ ಉನ್ನತಿಗೆ ಕಾರಣ ವಾದ ಎಲ್ಲ ಸಾಮಾಜಿಕ ಸಂಸ್ಥೆಗಳನ್ನು ಬೆಳೆಸಿಕೊಂಡಿದ್ದರೆಂದು ಅರ್ಥಾತ್ ಸಿದ್ಧ ವಾಗುವುದು. ಅವರಿಗೆ ತಮ್ಮದೇ ಆದಲಿಪಿ ಮತ್ತು ಶಿಕ್ಷಣ ಪದ್ಧತಿಗಳಿದ್ದವು. ಫಾದರ್ ಹೆರಾಸ್ ಅವರು ತೋರಿಸಿಕೊಟ್ಟಂತೆ ಅವರ ಲಿಪಿ ಚಿತ್ರಲಿಪಿಯಾಗಿತ್ತು[7]. ಅವರ ಭಾಷೆಯು ಶುದ್ಧ ಕನ್ನಡ, ತೆಲುಗು, ಅಥವಾ ತಮಿಳು ಆಗಿರದೆ ಈ ಮೂರೂ ಭಾಷೆಗಳಿಗೂ ನಿಕಟ ಸಂಬಂಧವುಳ್ಳ ಒಂದು ಭಾಷೆಯಾಗಿತ್ತು. ಫಾದರ್ ಹೆರಾಸ್‌ರವರು ಆ ಭಾಷೆಗೆ ಅತಿ ಪ್ರಾಚೀನ ದ್ರಾವಿಡ ಭಾಷೆಯೆಂದುದು ಯಥಾರ್ಥ ವಾಗಿದೆ[8].

ಮಹೆಂಜೊದಾರೋದ ಚಿತ್ರಲಿಪಿಯಲ್ಲಿ "ಕಣ್ಣೀರ" ಎಂಬ ಶಬ್ದವು ಬಳಸಲ್ಪಟ್ಟಿರುವುದರಿಂದ ಮತ್ತು ಕರ್ನಾಟಕ ಎಂಬ ಹೆಸರು ಭಾರತದ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳಲ್ಲಿ ಬಂದಿರುವುದರಿಂದ ಕನ್ನಡಿಗರಿಗೆ-ತಮ್ಮದೇ ಆದ ನಾಗರಿಕತೆಯಿತ್ತೆಂದು ಸುಲಭವಾಗಿ ಸಿದ್ಧಪಡಿಸಬಹುದು. ನಕುಲನು ಕರ್ನಾಟಕದ ಪಂಚಕುಲಗಳನ್ನು ಗೆದ್ದನೆಂದು ಮಹಾಭಾರತದಲ್ಲಿ ಉಲ್ಲೇಖಿಸಲ್ಪಟ್ಟದೆ[9]. ಈ ಎರಡೂ ಮಹಾಕಾವ್ಯಗಳ ರಚನೆಯ ವೇಳೆಗೆ ದ್ರಾವಿಡರು ಸಿಂಧೂಕೊಳ್ಳದ ದಕ್ಷಿಣಕ್ಕೆ ಬಂದು ನೆಲಸಿದ್ದರು.

4 History and Philosophy of Lingayat Religion.
5 ಇದೇ ಗ್ರಂಥ ಪು, 16
6 ಇದೇ ಗ್ರಂಥ ಪು, 17
7 ದಿ. ನ್ಯೂ ರೆವ್ಯೂ ಜುಲೈ 1936
8 ದಿ. ಕರ್ನಾಟಕ ಹಿಸ್ಟಾರಿಕಲ್ ರೆವ್ಯೂ ಜುಲೈ 1836
9 ಕನ್ನಡ ನಾಡಿನ ಚರಿತ್ರೆ Voli. p.5.

ಇವರು ಕೋಟೆ ಕೊತ್ತಳಗಳನ್ನು ನಿರ್ಮಿಸುವಲ್ಲಿ ಮತ್ತು ರಾಜ್ಯಾಡಳಿತದಲ್ಲಿ ಜಾಣರಾಗಿದ್ದರೆಂದೂ, ಋಗ್ವೇದದಲ್ಲಿ ಬರುವ ಉಲ್ಲೇಖಗಳಿಂದ ತಿಳಿಯುವುದು. ಈಗಿನ ಕರ್ನಾಟಕದ ನಾಗರಿಕತೆಯ ತಳಹದಿಯೇ ಆ ದ್ರಾವಡ ಸಂಸ್ಕೃತಿಯೆಂದೂ ಮನವರಿಕೆಯಾಗುವುದು[10]. ಆರ್ಯರು ದ್ರಾವಿಡರಿಂದ ಹಳ್ಳಿಗಳ ಕಲ್ಪನೆಯನ್ನು ತೆಗೆದು ಕೊಂಡರೆಂದು ಬಡೆನ್ ಪಾವೆಲ್ಲರ ಮತವಿದೆ[11]. ದ್ರಾವಿಡರು ಒಳ್ಳೆಯ ಸುಧಾರಿಸಿದ ನಾಗರಿಕತೆಯುಳ್ಳ ಜನವೆಂದು ಮತ್ತು ವೇದದಲ್ಲಿ ಬಂದ ದಸ್ಯುಗಳ ಸಂಬಂಧ ಇವರೊಡನೆ ಏನೂ ಇಲ್ಲನೆಂದೂ[12] ಶ್ರೀ ಡಾ|| ಅಳತೇಕರ್ ಎ. ಎಸ್. ಅವರು ಹೇಳುತ್ತಾರೆ.

ಶ್ರೀರಾಮನು ಸೀತೆಯ ಶೋಧನೆಯ ಸಲುವಾಗಿ ದಕ್ಷಿಣಕ್ಕೆ ಬಂದಾಗ ಕರ್ನಾಟಕವು ಅವನ ಕಾರ್ಯಕ್ಷೇತ್ರವಾಗಿತ್ತೆಂದು ರಾಮಾಯಣದಿಂದ ಗೊತ್ತಾಗುತ್ತದೆ. ಕರ್ನಾಟಕದ ಭಾಗವಾದ ಕಿಷ್ಕಿಂಧೆಯಲ್ಲಿ ವಾಸಿಸುತ್ತಿದ್ದ ಸುಗ್ರೀವನೊಡನೆ ಅವನು ಗೆಳೆತನಮಾಡಿದನು. ವಾಲಿಯ ಹೆಂಡತಿಯಾದ "ತಾರಾ" ಎಂಬುವಳು ಮಂತ್ರಗಳಲ್ಲಿ ನಿಷ್ಣಾತವಾಗಿದ್ದಳೆಂಬುದನ್ನು ನೋಡಿದರೆ[13], ಆಗ ಹೆಣ್ಣುಮಕ್ಕಳ ವಿದ್ಯಾಭ್ಯಾಸವು ಎಷ್ಟು ಮುಂದುವರಿದಿತ್ತೆಂಬುದು ತಿಳಿಯುವುದು. ಅವಳ ಗಂಡನಾದ ವಾಲಿಯು ಸುಗ್ರೀವನನ್ನು ಸೋಲಿಸಬೇಕೆಂಬ ಉದ್ದೇಶದಿಂದ ಅವಳು ಒಂದು ಧಾರ್ಮಿಕ ಕಾರ್ಯವನ್ನು ಮಾಡಿದಳು, ಈ ಸಂಗತಿಯು ಆಗಿನ ಕಾಲದಲ್ಲಿದ್ದ ಕರ್ನಾಟಕದೊಳಗಿನ ವಿದ್ಯಾ ಭ್ಯಾಸದಮೇಲೆ ಉತ್ತಮವಾದ ಬೆಳಕನ್ನು ಚೆಲ್ಲುತ್ತದೆ. ಹೆಣ್ಣುಮಕ್ಕಳುಸಹ ಧಾರ್ಮಿಕ ಯಜ್ಞಯಾಗಾದಿ ಕಾರ್ಯಗಳನ್ನು ಮಾಡುವಷ್ಟು ಮುಂದುವರಿದಿದ್ದರೆಂಬುದನ್ನು ನೋಡಿದರೆ ಗಂಡಸರು ಹೆಂಗಸರಷ್ಟೇ ಅಥವಾ ಅವರಿಗಿಂತಲೂ ಹೆಚ್ಚು ವಿದ್ಯಾವಂತರಾಗಿದ್ದರೆಂದು ಮತ್ತು ದ್ರಾವಿಡ ವಿದ್ಯಾಭ್ಯಾಸ ಹೆಚ್ಚು ಕಡಿಮೆ ಆರ್ಯರ ವಿದ್ಯಾಭ್ಯಾಸದಷ್ಟೇ ಮುಂದುವರಿದಿತ್ತೆಂದುವಿದಿತವಾಗುವುದು.

ಕ್ರಿ.ಶ. ಪ್ರಾರಂಭಕ್ಕಿಂತ ಮೊದಲು ಅತಿ ಪ್ರಾಚೀನ ದ್ರಾವಿಡ ಭಾಷೆಯ ಶಾಖೆಗಳಾದ ಪಂಚ ದ್ರಾವಿಡ ಭಾಷೆಗಳು ಅನಿರ್ದಿಷ್ಟ ಸ್ಥಿತಿಯಲ್ಲಿದ್ದುವು. ಕ್ರಿ.ಶ. ಪ್ರಾರಂಭದ ಕಾಲದಲ್ಲಿ ಅವುಗಳಿಗೆ ಒಂದು ಮೂರ್ತಸ್ವರೂಪ ಬರಹತ್ತಿತು. ಇದೇಕಾರಣವಾಗಿ ದ್ರಾವಿಡ ಭಾಷೆಗಳಲ್ಲಿ ಮುಖ್ಯವಾದ ಕನ್ನಡ, ತೆಲುಗು, ತಮಿಳು ಭಾಷೆಗಳ ಚರಿತ್ರೆ ಇದೇ ಕಾಲದಿಂದ ಪ್ರಾರಂಭವಾಗುತ್ತದೆ. ಕ್ರಿ.ಶ. ಸು ೪೫೦ರ ಹೊತ್ತಿನಲ್ಲಿ ಕೆತ್ತಲ್ಪಟ್ಟ

10 ಋಗ್ವೇದ 1-33-13

11 ಲ್ಯಾಂಡ್ ಸಿಸ್ಟಮ್ಸ್ ಆಫ್ ಬ್ರಿಟಿಷ್ ಇಂಡಿಯಾ (1) p, 120.

12 ವಿಲೇಜ್ ಕಮ್ಯುನಿಟಿಸ್ ಇನ್ ವೆಸ್ಟರ್ನ್ ಇಂಡಿಯಾ ಫ್ರಿಫೇಸ್ VIII

13 ಎಜ್ಯುಕೇಷನ್ ಇನ್ ಏನ್ಸಿಯೆಂಟ್ ಇಂಡಿಯಾ P.224

ಕಾಕುತ್ಸ್ಥವರ್ಮನ ಹಲ್ಮಿಡಿ ಶಾಸನವು ಕಾಲನಿರ್ದಿಷ್ಟವುಳ್ಳ ಅತಿ ಪ್ರಾಚೀನ ಶಾಸನವೆಂದು ಶ್ರೀ ಎಸ್. ಶ್ರೀಕಂಠಶಾಸ್ತ್ರಿ ಅವರು ಹೇಳುತ್ತಾರೆ[14]. ಆ ಕಾಲಕ್ಕಿಂತ ಮೊದಲು ಬರೆಹವಂತೂ ಗೊತ್ತಿತ್ತು. ನೃಪತುಂಗನ ಕವಿರಾಜಮಾರ್ಗದಲ್ಲಿ ಹೇಳುವಂತೆ ಕನ್ನಡದಲ್ಲಿ ಎಷ್ಟೋ ಗ್ರಂಥಕರ್ತರು ಆತನಿಗಿಂತ ಪೂರ್ವದಲ್ಲಿಯೇ ಇದ್ದರು[15]. ಬರೆದಿಡುವುದು ಅತಿ ಮಹತ್ವದ್ದು ಮತ್ತು ಅವಶ್ಯವಾದದ್ದು. ಯಾವುದನ್ನು ಸಕಾರಣಗಳಿಂದ ಪುಷ್ಟೀಕರಿಸಬಹುದೋ, ಅಂಥದ್ದನ್ನೇ ಬರೆದಿಡುತ್ತಿದ್ದರು. ಪ್ರತಿಭಾನ್ವಿತ ಕಡನ್ನ ಕವಿಗಳ ಕಾವ್ಯಗಳು ಮತ್ತು ಸಾಹಿತ್ಯವು ಮುಖದಿಂದ ಮುಖಕ್ಕೆ ಸಾಗಿಸಲ್ಪಡುತ್ತಿದ್ದವು.

ವಿದ್ಯೆಯನ್ನು ಬಾಯಿಯಿಂದಲ್ಲೇ ಹೇಳಿಕೊಡುವ ಮತ್ತು ನೆನಪಿಡುವ ಪದ್ಧತಿ ಪವಿತ್ರವಾದುದೆಂದೂ, ಮತ್ತು ಅದನ್ನು ಗ್ರಂಥ ರೂಪದಲ್ಲಿ ಬರೆದಿಡುವುದು ಪಾಪದ ಕೆಲಸವೆಂಬುದೂ ವಿದ್ವಾಂಸರ ಭಾವನೆಯಾಗಿತ್ತು. ಉಳಿದ ದೇಶಗಳಲ್ಲಿದ್ದಂತೆ ಕರ್ನಾಟಕದಲ್ಲಿಯೂ ಸಹ ಹಳ್ಳಿಯ ಸಾಹಿತ್ಯ (ಜಾನಪದ, ಸಾಹಿತ್ಯ,) ಹಾಡುಗಳು, ಕಥೆಗಳು, ಶೂರತನದ ವರ್ಣನೆ ಮೊದಲಾದವುಗಳು ಕನ್ನಡಿಗರಿಗೆ ತಲೆಮಾರುಗಳಿಂದ ನಡೆದು ಬಂದ ಸಂಪತ್ತುಗಳಾಗಿದ್ದುವು. ಸಾದಾ ಲೆಕ್ಕ, ಗುಣಾಕಾರ, ಕಳೆಯುವುದು (ವಜಾ ಬಾಕಿ), ಕೂಡುವುದು(ಬೇರೀಜು ಮಾಡುವುದು), ಶಾಸ್ತ್ರ ಮತ್ತು ಕಲೆಗಳ ಸಾಮನ್ಯ ಜ್ಞಾನ, ಭೌಗೋಲಿಕ ಸಾಮನ್ಯ ಜ್ಞಾನ, ಪ್ರಾಣಿವರ್ಗದ ಸ್ಥೂಲ ಪರಿಚಯ ಇವೆಲ್ಲವುಗಳನ್ನು ಮಾಡಿಕೊಡುವುದು ಕರ್ನಾಟಕದ ಚಿಕ್ಕಮಕ್ಕಳವಿದ್ಯಾಭ್ಯಾಸ ಕ್ರಮವಾಗಿತ್ತೆಂದು ನಿಶ್ಚಯವಾಗಿ ಹೇಳಬಹುದು. ಇವೆಲ್ಲವುಗಳ ಜ್ಞಾನ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರಿಗೆ ಜೀವನದಲ್ಲಿ ಅವಶ್ಯವಾಗಿತ್ತು.

ಕ್ರಿ.ಶ. ಪ್ರಾರಂಭ ಕಾಲದಲ್ಲಿ ಮತ್ತು ಅದಕ್ಕೂ ಕೆಲಕಾಲ ಮೊದಲು ಸಂಸ್ಕೃತವು ಕನ್ನಡದಷ್ಟೇ ಮುಖ್ಯವಾದುದೆಂದು ಕರ್ನಾಟಕದಲ್ಲಿ ಪರಿಗಣಿಸಲ್ಪಟ್ಟಿತ್ತು. ಕನ್ನಡವಲ್ಲದೆ ಸಂಸ್ಕೃತವನ್ನು ಉಪಭಾಷೆಯೆಂದು ಕರ್ನಾಟಕದ ಶಾಲೆಗಳಲ್ಲಿ ಕಲಿಸುತ್ತಿ

14 ಕರ್ನಾಟಕ ಕವಿಚರಿತೆ ಭಾಗ—1 (ಪು. 10)

15 ವಿಮಳೋದಯ ನಾಗಾರ್ಜುನ ।
ಸಮೇತ ಜಯ ಬಂಧು ದುರ್ವಿನೀತಾದಿಗಳೀ ।
ಕ್ರಮದೊಳ್ ನೆಗಳ್ಚಿಗದ್ಯಾ ।
ಶ್ರಮಪದ ಗುರುತಾ ಪ್ರತೀತಿಯಂ ಕೆಯ್ಕೊಂಡರ್ ॥೧॥
ಪರಮಶ್ರೀ ವಿಜಯ ಕವೀ ।
ಶ್ವರ ಪಂಡಿತ ಚಂದ್ರಲೋಕ ಪಾಲಾದಿಗಳೀ
ನಿರತಿಶಯ ವಸ್ತು ವಿಸ್ತರ ।
ವಿರಚನೆ ಲಕ್ಷ್ಯಂ ತದಾದ್ಯ ಕ್ರಾವ್ಯಕ್ಕೆಂದುಂ॥೨॥ (ಕ. ರಾ. ಮಾರ್ಗ)

ದ್ದರು. ತಮ್ಮ ಜ್ಞಾನವನ್ನು ಬೆಳೆಸಿಕೊಳ್ಳಲು ಮತ್ತು ತಮ್ಮ ವಿಚಾರಗಳನ್ನು ಸಮಗ್ರ ಭಾರತದಲ್ಲೆಲ್ಲ ತಿಳಿಯಪಡಿಸಲು ಸಂಸ್ಕೃತವನ್ನು ಅವಶ್ಯವಾಗಿ ಅಭ್ಯಾಸ ಮಾಡುತ್ತಿದ್ದರು. ಸಂಸ್ಕೃತ ಭಾಷೆಯ ಪಾಂಡಿತ್ಯವಿದ್ದುದರಿಂದಲೇ ಸಮಂತಭದ್ರ (ಕಿ. ಶ. ೪೦೦) ನಿಗೆ ಭಾರತದ ಬೇರೆಬೇರೆ ಭಾಗಗಳಲ್ಲಿಯ ಪಂಡಿತರೊಡನೆ ವಾಗ್ವಾದಗಳನ್ನು ಮಾಡಲು ಸಾಧ್ಯವಾಯಿತು. ಕನ್ನಡ ಸಾಹಿತ್ಯ ಚರಿತ್ರೆಯನ್ನು ನೋಡಿದರೆ ಕನ್ನಡ ಭಾಷೆಯು ಶತಮಾನಗಳಿಂದ ಸಂಸ್ಕೃತ ಭಾಷೆಯಲ್ಲಿಯ ಉತ್ತಮ ಸಾಹಿತ್ಯ ವಿಚಾರಗಳನ್ನು ಸ್ವೀಕರಿಸಿ ಪುಷ್ಟಿಪಡೆದುದನ್ನು ಕಾಣಬಹುದು. ಇದರಿಂದ ಕರ್ನಾಟಕದವರು ಆರ್ಯರು ಉಪಯೋಗಿಸುತ್ತಿದ್ದ ಶಿಕ್ಷಣ ಪದ್ಧತಿಯನ್ನು ಅನುಸರಿಸುತ್ತಿದ್ದರೋ ಹೇಗೋ? ಎಂಬ ಪ್ರಶ್ನೆ ಉದ್ಭವವಾಗುತ್ತದೆ. ಸಂಸ್ಕೃತ ಭಾಷೆಗೆ ಗಣ್ಯಸ್ಥಾನ ಮತ್ತು ಸಂಸ್ಕೃತ ಪಂಡಿತರಿಗೆ ವಿಶೇಷ ಮಾನ್ಯತೆ ಸಿಕ್ಕಾಗ ಕರ್ನಾಟಕದವರೂ ಸಂಸ್ಕೃತ ಸಾಹಿತ್ಯ ಮತ್ತು ಆ ಭಾಷೆಯ ಪಂಡಿತರನ್ನು ತಮ್ಮ ಆದರ್ಶವಾಗಿಟ್ಟುಕೊಂಡಿದ್ದರೆ, ಆಶ್ಚರ್ಯಪಡಬೇಕಾದುದೇನೂ ಇಲ್ಲ. ಆದರೆ ಮಾತೃ ಭಾಷೆಯಾದ ಕನ್ನಡ ಭಾಷಾಭ್ಯಾಸವನ್ನು ಕರ್ನಾಟಕದವರು ಎಂದೂ ಹೀಗಳೆದಿಲ್ಲ ವೆಂಬುದನ್ನು ನೆನಪಿನಲ್ಲಿಡಬೇಕು.

ಕರ್ನಾಟಕದ ಪೂರ್ವೇತಿಹಾಸವನ್ನು ಅಭ್ಯಸಿಸಿದರೆ ದ್ರಾವಿಡರು ಸಂಸ್ಕೃತವನ್ನೂ ಆರ್ಯಧರ್ಮವನ್ನೂ ಸ್ವೀಕರಿಸಿದ್ದರೆಂಬುದು ಸ್ಪಷ್ಟವಾಗುವುದು. ಆರ್ಯಧರ್ಮ ಸ್ವೀಕರಿಸಿದ ಕನ್ನಡಿಗರಿಗೆ ಪ್ರಾರಂಭದಲ್ಲಿ ಆರ್ಯಧರ್ಮತತ್ವಗಳು ಮತ್ತು ಹೊಸದಾದ ಧಾರ್ಮಿಕ ಕಾರ್ಯಾಚರಣೆಗಳು ಗೊತ್ತಿದ್ದಿಲ್ಲ. ಅದೇ ಪ್ರಕಾರ ಅವರಿಗೆ ಆರ್ಯಪದ್ಧತಿಯಂತೆ ವಿದ್ಯಾಭ್ಯಾಸ ಮಾಡಿಸುವ ಕೇಂದ್ರಗಳನ್ನು ಸ್ಥಾಪಿಸುವುದೂ ಗೊತ್ತಿದ್ದಿಲ್ಲ. ಕರ್ನಾಟಕದ ದ್ರಾವಿಡರು ಮತ್ತು ಆರ್ಯರು ಇವರ ಶೈಕ್ಷಣಿಕ ಕ್ಷೇತ್ರದಲ್ಲಿ ಎಲ್ಲಕ್ಕೂ ಮೊದಲು ಸಂಪರ್ಕವಾದುದು ಕದಂಬ ರಾಜಮನೆತನದ ಪ್ರಸಿದ್ಧ ಅರಸನಾದ ಮುಕ್ಕಣ್ಣನ ಜೀವನ ಚರಿತ್ರೆಯಿಂದ ತಿಳಿದುಬರುತ್ತದೆ. ತನ್ನ ರಾಜ್ಯದ ಅಥವಾ ಹತ್ತಿರದ ಪ್ರದೇಶಗಳಲ್ಲಿ ಬ್ರಾಹ್ಮಣರು ಸಿಗದಿದ್ದರಿಂದ ಅವನು ಅಹಿಚ್ಛತ್ರದ ಬ್ರಾಹ್ಮಣರನ್ನು ಕರೆಯಿಸಿಕೊಂಡನು. ಕದಂಬರು ಬ್ರಾಹ್ಮಣರೆಂಬುದು ನಮಗೆ ಗೊತ್ತು. ಇದರಿಂದ ದಕ್ಷಿಣಭಾರತದ ಬ್ರಾಹ್ಮಣರು ಉತ್ತರಭಾರತದ ಬ್ರಾಹ್ಮಣರನ್ನು ಏಕೆ ಕರೆಯಿಸಿಕೊಂಡರೆಂಬುದು ಎದ್ದುನಿಲ್ಲುವ ಪಶ್ನೆ. ಹೊಸದಾಗಿ ಆರ್ಯಧರ್ಮ ಸ್ವೀಕರಿಸಿದ ಬ್ರಾಹ್ಮಣರಿಗೆ ಆರ್ಯಧರ್ಮದಲ್ಲಿ ಪ್ರಚಲಿತವಾದ ಯಜ್ಞ ಯಾಗಾದಿಗಳನ್ನು ಮತ್ತು ಅವುಗಳನ್ನು ನಿತ್ಯದಲ್ಲಿ ನಡೆಯಿಸಿಕೊಂಡು ಹೋಗಲು ಬಹುಶಃ ಬರುತ್ತಿದ್ದಿಲ್ಲವೆನಿಸುವುದು. ಆದ ಕಾರಣದಿಂದಲೇ ಅವರನ್ನು ಕರೆಯಿಸಿಕೊಂಡಿರಬೇಕು. ಈ ಕಾರಣದಿಂದ ಮುಕ್ಕಣ್ಣ ಕದಂಬನು ತನಗೆ ಬೇಕಾದ ಬ್ರಾಹ್ಮಣರು ದಕ್ಷಿಣಾಪಥದಲ್ಲಿಲ್ಲದಿದ್ದುದನ್ನು ಕಂಡು

ಉತ್ತರಕ್ಕೆ ಹೋಗಿ ಅಹಿಚ್ಛತ್ರದ[16] ಅಗ್ರಹಾರದ ಬ್ರಾಹ್ಮಣರನ್ನು ಪೂಜಿಸಿ ೧೨೦೦೦ ಅಗ್ನಿಹೋತ್ರದಿಂದ ಪುನೀತರಾದ ೩೨ ಬ್ರಾಹ್ಮಣ ಮನೆತನಗಳನ್ನು ಕರೆದುಕೊಂಡು ಬಂದು ಶಿಕಾರಿಪುರದ ತಾಲ್ಲೂಕಿನ ಸ್ಥಾನಕುಂದೂರಿನ (ಈಗಿನ ತಾಳಗುಂದ) ಬಳಿಯಲ್ಲಿ ಮಹಾ ಅಗ್ರಹಾರವನ್ನು ನಿರ್ಮಿಸಿ ಆತ ನೆಲೆಗೊಳಿಸಿದನು. ಕಾಲಕ್ರಮೇಣ ಆರ್ಯರ ವಿದ್ಯಾಭ್ಯಾಸ ಕ್ರಮವನ್ನು ಕನ್ನಡಿಗರು ಪಾಲಿಸಹತ್ತಿದರು. ಇದರ ಜೊತೆಗೆ ತಮ್ಮ ಪದ್ಧತಿಯ ಪ್ರಕಾರವಾಗಿಯೂ ವಿದ್ಯಾಭ್ಯಾಸ ಮಾಡುತ್ತಿದ್ದರು. ಅನಂತರ ಕದಂಬರಾಜರು ಯಜ್ಞಮಾಡಿದುದು ನಮಗೆ ಕಂಡುಬರುವುದು. ಮಯೂರವರ್ಮನು ಅಶ್ವಮೇಧಯಾಗ ಮಾಡಿದನೆಂದು ಪ್ರತೀತಿಯಿದೆ. ಅರಸನು ಈ ಅಶ್ವಮೇಧ ಯಾಗವನ್ನು ಮಾಡಿದ ಮೇಲೆ ಈ ಬ್ರಾಹ್ಮಣರಿಗೆ ೧೪೦ ಹಳ್ಳಿಗಳನ್ನು ದಾನವಾಗಿ ಕೊಟ್ಟನು. ಇದರಿಂದ ದ್ರಾವಿಡ ಪದ್ಧತಿಯನ್ನು ಆರ್ಯ ಪದ್ಧತಿಯೊಡನೆ ಸಮನ್ವಯಗೊಳಿಸುವ ಕಾರ್ಯ ಕರ್ನಾಟಕದಲ್ಲಿ ನಡೆದಿತ್ತೆಂಬುದು ಸ್ಪಷ್ಟವಾಗುವುದು.

---

16 ವಿಜಯ ನಗರ ಸಾಮ್ರಾಜ್ಯದ ವೀರ ಬಣಂಜುಗಳು ತಾವು ಮೂಲ ಅಹಿಚ್ಛತ್ರದವರೆಂದು ಹೇಳಿಕೊಂಡಿದ್ದಾರೆ—ಅಹಿಚ್ಛತ್ರವೆಂದರೆ ಕಾಶ್ಮೀರ ದೇಶ.

—ಸೋಷಿಯಲ್ ಅಂಡ್ ಪೊಲಿಟಿಕಲ್ ಲೈಫ್ ಇನ್ ವಿಜಯ ನಗರ ಎಂಪೈರ್

Volume I', page 98

ಇವರ ಹಾಗೆಯೆ ಕಾಶ್ಮೀರದಿಂದ ಕರ್ನಾಟಕಕ್ಕೆ ಬ್ರಾಹ್ಮಣರ ಪಂಗಡಗಳು ಕಾಲಕಾಲಕ್ಕೆ ವಿಶೇಷವಾಗಿ ಬಂದಿವೆ. ರಾಷ್ಟ್ರಕೂಟ ಕನ್ನರ (ಕೃಷ್ಣ—ಕಾಲ ಸುಮಾರು ೯೪೫--೫೬)ನ ಕಾಲಕ್ಕಿಂತ ಹಿಂದೆಯೇ ಕಾಶ್ಮೀರದ ಶೈವ ಬ್ರಾಹ್ಮಣರಾದ " ಸಾವಾಸಿ " ಗಳು ಕರ್ನಾಟಕದಲ್ಲಿ ಬಂದು ನೆಲಸಿದಂತೆ ಹಾಸನ ತಾಲ್ಲೂಕಿನ ಕ್ರಿ.ಶ. ೧೨೧೭ ನೆಯ ಇಸ್ವಿಯ ೬೧ನೆಯ ಶಾಸನ ತಿಳಿದುಬರುವುದು. ಕನ್ನಡದ ಪ್ರಸಿದ್ಧ ಕವಿಗಳಾದ ರುದ್ರಭಟ್ಟ, ಮಹಾಲಿಂಗರಂಗರು ಈ ಸಾವಾಸಿ ಬ್ರಾಹ್ಮಣರೆಂದು ಹೇಳಿಕೊಂಡಿದ್ದಾರೆ, ಈ ಸಾವಾಸಿಗಳಲ್ಲಿ ಕ್ಷತ್ರಿಯ ವೈಶ್ಯರೂ ಇದ್ದರು. ಹಾಗಾದರೆ ಸಾವಾಸಿ ಎಂಬುದೊಂದು ಕುಲವಲ್ಲ ಎಂಬುದು ಸಿದ್ಧವಾಗುವುದು. " ಸಾವಾಸಿ ತಂತ್ರಾಧಿಷ್ಠಾಯಕರು " ಎಂದು ಮೇಲಿನ ಶಾಸನದಲ್ಲಿಯೇ ಹೇಳಿದೆ.

ಇದೂ ಅಲ್ಲದೆ ಕಾಲಕಾಲಕ್ಕೆ ಕಾಶ್ಮೀರದಿಂದ ಕರ್ನಾಟಕಕ್ಕೆ ಬಂದವರ ಸಂಖ್ಯೆಗೆ ಕೊರತೆಯಿಲ್ಲ. ೧೨ನೆಯ ಶತಮಾನದ ಹೊತ್ತಿನಲ್ಲಿ ಬಸವಣ್ಣನೂ ಕೂಡ ಕಾಶ್ಮೀರಕ್ಕೆ ವೀರಬಣಂಜು ಸಂಘದವರ ಸಹಾಯಪಡೆದು ಅಲ್ಲಿನ ೬೦೦೦ ಅಥವಾ ೧೨೦೦೦ ಜನ ಜಂಗಮರನ್ನು ಕರೆತಂದನೆಂಬ ಐತಿಹ್ಯವುಂಟು. ಪುರಾಣಗಳಲ್ಲಿ ಇದು ಪವಾಡಗಳ ತೆರೆಯಿಂದ ಮುಚ್ಚಿದೆ. ಕಾಶ್ಮೀರದ ಸವ್ವಾಲಕ್ಷ ಪ್ರದೇಶದ ದೊರೆಯಾದ ಮೋಳಿಗೆ ಮಾರಯ್ಯನವರು ಅವರ ಧರ್ಮಪತ್ನಿ ಮಹಾದೇವಿಯಮ್ಮ ಇವರಿಬ್ಬರೂ ರಾಜ್ಯವನ್ನು ತೊರೆದು ಕಲ್ಯಾಣಕ್ಕೆ ಬಂದರೆಂಬ ಐತಿಹ್ಯ ವೀರಶೈವ ಪುರಾಣಗಳಲ್ಲೆಲ್ಲ ಬರುವುದು. ಹೀಗೆ ಅವ್ಯಾಹತವಾಗಿ ಪ್ರಾಚೀನ ಕಾಲದಿಂದಲೂ ಕಾಶ್ಮೀರಿಗಳು ಕರ್ನಾಟಕಕ್ಕೆ ಬಂದು ನೆಲಸಿ ಎರಡೂ ರಾಷ್ಟ್ರಗಳ ಸಂಸ್ಕೃತಿಗಳ ಸಂಗಮಗೊಳಿಸಿದ್ದಾರೆ.

# ಗ್ರಾಮಾಭಿವೃದ್ಧಿ

## ಆದಾಯ ಹೆಚ್ಚಿಸಲು ಗಿಡಮರಗಳನ್ನು ಬೆಳೆಸಿರಿ

—ಎಂ. ಮುನಿರೆಡ್ಡಿ.

ಗ್ರಾಮಗಳಅಭಿವೃದ್ಧಿ ಮತ್ತು ಬಡತನದ ನಿವಾರಣೆ ಆಗದೆ ದೇಶದ ಅಭಿವೃದ್ಧಿ ಆಗುವುದಿಲ್ಲ. ಎಲ್ಲಬಡ ಕುಟುಂಬಗಳ ಬಡತನ ಮತ್ತು ಮೌಢ್ಯದನಿವಾರಣೆ ಆಗದೆ ಅಭಿವೃದ್ಧಿ ಎನ್ನುವುದು ಕನಸಿನ ಮಾತು. ಉದ್ಯೋಗವಿಲ್ಲದೆ ಬಡತನ ನಿವಾರಣೆ ಆಗುವುದಿಲ್ಲ. ಆದುದರಿಂದ ಬಡಕುಟುಂಬಗಳಿಗೆ ಮಾಡಲು ಸಾಧ್ಯವಾಗುವ ಉದ್ಯೋಗವನ್ನುಕಲ್ಪಿಸಬೇಕು.

ಬಡತನಕ್ಕೆ ಅನೇಕ ಕಾರಣಗಳಿರಬಹುದು. ಅವುಗಳಲ್ಲಿ ಮುಖ್ಯವಾದ ಕಾರಣಗಳು ಉದ್ಯೋಗವಿಲ್ಲದಿರುವುದು, ಸೋಮಾರಿತನ, ತಿಳುವಳಿಕೆ ಇಲ್ಲದಿರುವುದು, ಇವು ಸಮೀಪದ ಕಾರಣಗಳು.

ಜನಗಳಲ್ಲಿ ಸ್ವಾಭಿಮಾನವಿರಬೇಕು. ಸ್ವಾಭಿಮಾನವಿರಲು ವರಮಾನವಿರಬೇಕು ವರಮಾನವಿರಬೇಕಾದರೆ ಜನರು ದುಡಿಯಬೇಕು. ಉದ್ಯೋಗಶೀಲರಾಗಬೇಕು- ಜನರಿಗೆ ಮಾಡಲು ಸಾಧ್ಯವಾಗುವಂತಹ ಉದ್ಯೋಗವಿರಬೇಕು. ಇಂತಹ ಒಂದು ಉದ್ಯೋಗವೆಂದರೆ ಗಿಡಮರಗಳನ್ನು ಬೆಳೆಯಿಸುವುದು. ಇದು ಬಹುಪಾಲು ಜನರಿಗೆ ಮಾಡಲು ಸಾಧ್ಯವಾಗುವ ಕೆಲಸ.

ಗಿಡಮರಗಳನ್ನು ಬೆಳೆಯಿಸುವುದರಿಂದ ವ್ಯವಸಾಯಕ್ಕೂ ಅನುಕೂಲವಾಗುತ್ತದೆ.ಕೈಗಾರಿಕೆಗೂ ಅನುಕೂಲವಾಗುತ್ತದೆ. ಎರಡೂ ಅಭಿವೃದ್ಧಿ ಹೊಂದುತ್ತವೆ. ಜನರಿಗೆ ವರಮಾನವೂ ಉದ್ಯೋಗವೂ ಲಭಿಸಿ ಎಲ್ಲ ಹಿತಗಳು ಆಗುತ್ತವೆ.

ಗಿಡಮರಗಳನ್ನು ಬೆಳಸುವಾಗ ಹೆಚ್ಚು ಪ್ರಯೋಜನವಾಗುವಂತಹ ಮಾರ್ಗವನ್ನು ಅನುಸರಿಸಬೇಕು. ಕೆಲವು ಮರಗಳು ಶೀಘ್ರವಾಗಿ ಬೆಳೆದು ಫಲಕೊಡುತ್ತವೆ. ಆದರೆ ಬಹುಕಾಲ ಇರುವುದಿಲ್ಲ. ಉದಾಹರಣೆಗೆ ಪರಂಗಿ ಗಿಡ ನುಗ್ಗೆಗಿಡ ಇತ್ಯಾದಿ. ಇನ್ನು ಕೆಲವು ಮರಗಳು ನಿಧಾನವಾಗಿ ಬೆಳೆದು ಹಲವು ವರ್ಷಗಳ ನಂತರ ಫಲಕ್ಕೆ ಬರುತ್ತವೆ- ಅಲ್ಲಿಂದ ಮುಂದೆ ಬಹಳ ವರ್ಷ ಫಲ ಕೊಡುತ್ತವೆ. ಉದಾಹರಣೆಗೆ ತೆಂಗು

ಮಾವು ಸಪೋಟ ಇತ್ಯಾದಿ. ಜನರು ಎರಡು ಬಗೆಯ ಗಿಡಮರಗನ್ನೂ ಬೆಳೆಯಿಸಬೇಕು.

ಮರಗಿಡಗಳು ಮಕ್ಕಳಂತೆ. ಮಕ್ಕಳನ್ನು ಸಾಕುವುದು ಕಷ್ಟ, ಸುಖ ಅನಿಶ್ಚಿತ. ಮರಗಳನ್ನು ಬೆಳೆಯಿಸುವುದು ಸುಲಭ ಆದರೆ ಫಲ ನಿಶ್ಚಿತ. ಒಂದೆರಡು ಮಕ್ಕಳನ್ನು ಸಾಕಲು ಪಡಬೇಕಾದ ಶ್ರಮದಲ್ಲಿ ಅರ್ಧದಷ್ಟು ಶ್ರಮಪಟ್ಟರೂ 50-100 ತೆಂಗಿನ ಗಿಡಗಳನ್ನು ಬೆಳಸಬಹುದು. ಕನಿಷ್ಟ 25 ತೆಂಗಿನ ಗಿಡಗಳನ್ನಾದರೂ ಬೆಳಸಬಹುದು. 25 ತೆಂಗಿನಗಿಡಗಳನ್ನು ಸುಮಾರು ಹತ್ತು ವರ್ಷಗಳು ಕಾಪಾಡಿದರೆ ಅವು ಅಲ್ಲಿಂದ ಮುಂದೆ ಮಕ್ಕಳಿಗಿಂತಲೂ ಮಿಗಿಲಾದ ಸುಖವನ್ನು 50–100 ವರ್ಷಗಳ ತನಕ ಕೊಡುತ್ತವೆ.

ಕಾಲವನ್ನಾಗಲೀ, ಶಕ್ತಿಯನ್ನಾಗಲಿ ಯೌವನವನ್ನಾಗಲೀ ಕೂಡಿಡಲು ಅಸಾಧ್ಯ. ಆದರೆ ಕೂಡಿಡಲು ಮನಸ್ಸಿದ್ದರೆ ಮಾರ್ಗವಿದೆ. ಮರಗಳನ್ನು ಬೆಳೆಯಿಸುವುದೇ ಆ ಮಾರ್ಗ. ವಿರಾಮ ಸಿಕ್ಕಿದಾಗ ಶಕ್ತಿಇದ್ದಾಗ ತೆಂಗು ಮಾವು, ಹಲಸು ಸಪೋಟ ಮುಂತಾದ ಮರಗಳನ್ನು ಬೆಳೆಸಿದರೆ ಕಾಲವನ್ನೂ, ಶಕ್ತಿಯನ್ನೂ, ಯೌವನವನ್ನೂ, ಎಲ್ಲಕ್ಕೂ ಮಿಗಿಲಾಗಿ ಧರ್ಮವನ್ನೂ ಕೂಡಿಟ್ಟಂತೆ ಆಗುತ್ತದೆ. ಈ ರೀತಿ ಕಾಲವನ್ನೂ ಶಕ್ತಿಯನ್ನೂ ಪರಿವರ್ತಿಸಿ ಮಿತಿಯಿಲ್ಲದೆ ಕೂಡಿಡಬಹುದು. ಇಷ್ಟೇ ಮರಗಳನ್ನು ನೆಡಬೇಕೆಂಬ ಒತ್ತಾಯವಿಲ್ಲ.

ಉದ್ಯೋಗವಿಲ್ಲವೆಂದು ಸೋಮಾರಿಗಳಾಗಿರುವುದಕ್ಕಿಂತಲೂ ಮರಗಳನ್ನು ಬೆಳೆಯಿಸುವುದು ಬುದ್ಧಿವಂತಿಕೆಯ ಲಕ್ಷಣ. ಕಾಲ ಮತ್ತು ಶಕ್ತಿಗಳು ವ್ಯಯವಾಗಿ ಹೋಗುವಂತಹವುಗಳು. ಅವುಗಳನ್ನು ನೇರವಾಗಿ ಕೂಡಿಸಲು ಸಾಧ್ಯವಿಲ್ಲ. ಆದರೆ ದುಡಿಮೆಯ ಮೂಲಕ ಮರಗಳನ್ನು ಬೆಳೆಯಿಸುವುದರ ಮೂಲಕ ಪರಿವರ್ತಿಸಿ ಕೂಡಿಸಬಹುದು. ಮರಗಿಡಗಳನ್ನು ಬೆಳೆಯಿಸುವುದು ಆರ್ಥಿಕ ದೃಷ್ಟಿಯಿಂದ ಅನಿವಾರ್ಯವೂ ಧರ್ಮದ ದೃಷ್ಟಿಯಿಂದ ಸಮ್ಮತವೂ ಹರ್ಷದಾಯಕವೂ ಆದ ಕೆಲಸ. ಸುಖಕ್ಕೆ ರಾಜಮಾರ್ಗ. ಜನರ ಮನಸ್ಸಿಗೆ ನೋವಾಗಲೀ ದೇಶಕ್ಕೆ ಅಪಾಯವಾಗಲೀ ಆಗುವುದಿಲ್ಲ.

ಮರಗಳನ್ನು ಬೆಳೆಯಿಸಲು ವಿದ್ಯಾವಂತರಾಗಬೇಕಾಗಿಲ್ಲ. ಮನಸ್ಸಿದ್ದರೆ ಸಾಕು. ಪದವೀಧರರಾದರೂ ಉದ್ಯೋಗ ಸಿಕ್ಕುವುದಿಲ್ಲ. ಉದ್ಯೋಗ ಸಿಕ್ಕುತ್ತಿಲ್ಲವೆಂದು ಪೇಚಾಡುವಂತಹ ಪದವೀಧರರಾಗಲು ಅವಕಾಶ ಮಾಡಿಕೊಡುವ ವಿದ್ಯೆ ಬಹುಪಾಲು ಅಪ್ರಯೋಜಕವೂ, ಸಮಾಜಕ್ಕೆ ಅಪಾಯಕಾರಿ ಅಥವಾ ಕಳಂಕವೂ, ದೇಶಕ್ಕೆ ಹೊರಲಾರದ ಭಾರವು ಆಗುತ್ತದೆ.

ವಿದ್ಯೆಯ ಗುರಿ ಕೇವಲ ಉದ್ಯೋಗವಲ್ಲ. ಒಳ್ಳೆಯ ನಡತೆ ಮತ್ತು ಜೀವನ. ಉದ್ಯೋಗವೇ ವಿದ್ಯೆಯ ಗುರಿ ಅಲ್ಲ ಸಾಧನ ಮಾತ್ರ. ವಿದ್ಯೆ ಇಲ್ಲದವರೂ ಉದ್ಯೋಗಿಗಳಾಗಬಹುದು. ಉದ್ಯೋಗವಿಲ್ಲದೆ ವರಮಾನವಿಲ್ಲ. ವರಮಾನವಿಲ್ಲದೆ ಸುಖವಿಲ್ಲ ಗೌರವವಿಲ್ಲ. ಸುಖವೆಂಬುದು ಕನಸು. ಆರ್ಥಿಕ ಭದ್ರತೆಯಿಲ್ಲದ ಜನರ ಮತ್ತು ದೇಶದ ಸ್ಥಿತಿ ಶೋಚನೀಯವಾದದು. ಈಗ ನಾವು ಮತ್ತು ನಮ್ಮ ದೇಶ ಇಂತಹ ಶೋಚನೀಯವಾದ ಸ್ಥಿತಿಯಲ್ಲಿ ಇದ್ದೇವೆ. ಇದರ ನಿವಾರಣೆ ದೇಶದ ಎಲ್ಲ ಹಿತೈಷಿಗಳ ಕರ್ತವ್ಯ.

ಇಂತಹ ಸ್ಥಿತಿಯಲ್ಲಿ ವೈಯಕ್ತಿಕವಾಗಿ ಸಾಮೂಹಿಕವಾಗಿ ಮಾಡಲೇಬೇಕಾದ ಬಹು ಜನರು ಮಾಡಬಹುದಾದ ಕೆಲಸವೆಂದರೆ ಮರಗಿಡಗಳನ್ನು ಬೆಳೆಯಿಸುವುದು. ಎಷ್ಟೆಷ್ಟು ಹೆಚ್ಚು ಸಂಖ್ಯೆಯಲ್ಲಿ ಮರಗಳನ್ನು ಬೆಳೆಸುತ್ತಾರೋ ಜನರಿಗೆ ಅಷ್ಟಷ್ಟು ಹೆಚ್ಚಿಗೆ ಸುಖ ದೊರೆಯುತ್ತದೆ. ಜನರ ಸುಖ ಮತ್ತು ಅಭ್ಯುದಯವೇ ದೇಶದ ಸುಖ ಮತ್ತು ಅಭ್ಯುದಯ.

ಗಿಡಮರಗಳನ್ನು ಬೆಳೆಯಿಸಲು ಪ್ರಕೃತಿಯ ನೆರವೂ ದೇವರ ಆಶೀರ್ವಾದವೂ ಸರ್ವದಾ ದೊರೆಯುತ್ತವೆ. ಬಸವಣ್ಣನವರು ಇದನ್ನೇ ಹೇಳಿರುವುದು. "ಬೆಟ್ಟದಾ ತುದಿಯಲ್ಲಿ ಬೆಳೆದಿದುವ ವೃಕ್ಷಕ್ಕೆ ಕಟ್ಟೆಯನು ಕಟ್ಟಿ ನೀರೆರೆದವರು ಯಾರು?"

ಗಿಡಮರಗಳನ್ನು ಬೆಳೆಯಿಸುವುದರಿಂದ ಜನಕ್ಕೆ ದೇಶಕ್ಕೆ ಆರ್ಥಿಕ ಧಾರ್ಮಿಕ ಪ್ರಯೋಜನಗಳೆರಡೂ ಏಕಕಾಲದಲ್ಲಿ ಲಭಿಸುತ್ತವೆ.

ಅಶೋಕ ಚಕ್ರವರ್ತಿಯು ಸಾಲುಮರಗಳನ್ನು ಹಾಕಿಸಿದನೆಂದು ನಾವು ಚರಿತ್ರೆಯಲ್ಲಿ ಓದುತ್ತೇವೆ. ಎಲ್ಲರೂ ಚಕ್ರವರ್ತಿಗಳಾಗುವ ಅವಕಾಶವಿಲ್ಲ. ಆದರೆ ಎಲ್ಲರಿಗೂ ಮರಗಳನ್ನು ಬೆಳೆಯಿಸುವ ಸದವಕಾಶವಿದೆ. ಅದು ಜನರಿಗೆ ತಿಳಿಯಬೇಕು. ತಿಳಿದವರು ತಿಳಿಸಬೇಕು. ಮನಸ್ಸಿಟ್ಟು ಮರಗಳನ್ನು ಬೆಳೆಸಬೇಕು. ಈ ಅವಕಾಶ ದೈವಾನುಗ್ರಹವೆಂದು ಸಂತೋಷಪಡಬೇಕು. ಸದುಪಯೋಗಪಡಿಸಿಕೊಳ್ಳಬೇಕು.

ಮರಗಿಡಗಳನ್ನು ಬೆಳೆಯಿಸಿದಮೇಲೆ ಜನರು ಉತ್ತಮರು ಎಂದು ಬೇರೆಯಾಗಿ ಹೇಳಬೇಕಾಗಿಲ್ಲ.

# ಶರಣಧರ್ಮ ಸಂದೇಶ

—ಡಾ|| ಎಲ್. ತಿಪ್ಪೇರುದ್ರಸ್ವಾಮಿ, ಎಂ.ಎ., ಪಿ.ಹೆಚ್‌ಡಿ.,
ಮೈಸೂರು ವಿಶ್ವವಿದ್ಯಾನಿಲಯ

ಜೀವನದ ಪೂರ್ಣತೆಗೆ ಧರ್ಮ ಅನಿವಾರ್ಯ. ಆದರೆ ಧರ್ಮದ ಸ್ವರೂಪ ಇಲ್ಲಿ ಅತ್ಯಂತ ವ್ಯಾಪಕವಾಗಬೇಕಾಗುತ್ತದೆ ಕೇವಲ ಭಾವುಕವಾದ ಆಚಾರಗಳ ಸಮುದಾಯವಲ್ಲ. ಅವಿಚಾರಿತ ಶ್ರದ್ಧೆಯಲ್ಲ. ಬುದ್ಧಿ ಹೃದಯಗಳ ಸಮತೋಲನದ ಬೆಳವಣಿಗೆಗೆ ಸಹಾಯಕವಾಗಬಲ್ಲಂತಹುದೇ ಪೂರ್ಣ ಧರ್ಮ. ನಿಜವಾದ ಧರ್ಮ ಆಚಾರದ ಒರೆಗಲ್ಲಿಗೆ ಉಜ್ಜಿದಷ್ಟೂ ಹೆಚ್ಚು ಹೊಳಪನ್ನು ಕೊಡುತ್ತದೆ. ವೈಜ್ಞಾನಿಕ ಆವಿಷ್ಕಾರಗಳ ಹಿನ್ನೆಲೆಯಲ್ಲಿ ವಿವೇಚಿಸಿದಷ್ಟೂ ಹೆಚ್ಚುವ್ಯಾಪಕವಾಗುತ್ತದೆ. ಶಕ್ತಿ ಪೂರ್ಣವಾಗುತ್ತದೆ. ಅಂತಹ ಸನಾತನ ತತ್ತ್ವಗಳು ಮಾತ್ರ ಚಿರಂತನವಾದ ಧಾರ್ಮಿಕ ಸಂದೇಶವನ್ನು ಕೊಡಬಲ್ಲವು ಬಸವಾದಿ ಶರಣರು ಆಚರಿಸಿ ತೋರಿಸಿದ ಧರ್ಮ ಅಂತಹ ಸನಾತನ ಶಾಶ್ವತ ತತ್ವಗಳ ತಳಹದಿಯ ಮೇಲೆ ಬೆಳೆದು ಬಂದದ್ದು.

ಶರಣರ ಧಾರ್ಮಿಕ ವಿವೇಚನೆಯಲ್ಲಿ ಆಧುನಿಕ ಮನೋಧರ್ಮಕ್ಕೆ ಅತ್ಯಂತ ಮೆಚ್ಚುಗೆಯಾಗುವ ಅಂಶವೆಂದರೆ ಸ್ವತಂತ್ರವಿಚಾರಶೀಲತೆ. ಅಂಧಶ್ರದ್ಧೆಗೆ ಅವರೆಂದೂ ಪುರಸ್ಕಾರ ಕೊಟ್ಟವರಲ್ಲ. "ಸತ್ಯವನ್ನೂ ಅಸತ್ಯವನ್ನೂ ಪ್ರತ್ಯಕ್ಷ ಪ್ರಮಾಣಿಸಿಯಲ್ಲದೆ ನಿಶ್ಚಯವನರಿಯಬಾರದು. ಗುರುವಾದರೂ ಲಿಂಗವಾದರೂ ಜಂಗಮವಾದರೂ ಪರೀಕ್ಷಿಸಿ ಹಿಡಿಯದವನ ಭಕ್ತಿ, ವಿರಕ್ತಿ, ತೂತು ಕುಂಭದಲ್ಲಿಯ ನೀರು; ಸೂತ್ರ ತಪ್ಪಿದ ಬೊಂಬೆ" ಎನ್ನುತ್ತಾರೆ ಶರಣರು. ನೇರವಾಗಿ ತಮ್ಮ ಅರಿವಿಗೆ ಮತ್ತು ಅನುಭವಕ್ಕೆ ಬಾರದುದನ್ನು ಅವರು ಒಪ್ಪಲಿಲ್ಲ.

ಯಾವುದೇ ಗ್ರಂಥದಲ್ಲಿ ಹೇಳಿದೆಯೆಂದ ಮಾತ್ರಕ್ಕೆ ಯಾವುದನ್ನೂ ನಾವು ಪೂರ್ಣವಾದುದೆಂದು ಹೇಳಬೇಕಾಗಿಲ್ಲ. ಇಂದು ನಮ್ಮ ಅನುಭವದ ಹಿನ್ನೆಲೆಯಲ್ಲಿ ಉಜ್ಜಿ ನೋಡಿದಾಗಲೂ ಅವು ಹೊಳೆದು ತೋರಬೇಕು. ಉಳಿಯುವಂತಿರಬೇಕು. ಅಂತಹವು ಮಾತ್ರ ಮಾನ್ಯವಾಗುತ್ತವೆ. ಸನಾತನ ತತ್ತ್ವಗಳಿಗೆ ಪ್ರಾಚೀನತೆಯೊಂದೇ ಆಧಾರವಲ್ಲ. ಸತ್ಯಸಾಧನೆಗೆ ಶಾಶ್ವತವಾದ ಮಾರ್ಗದರ್ಶನ ಮಾಡಿಸುವಂತಹ ತತ್ತ್ವಗಳು ಮಾತ್ರ ಸನಾತನವಾದುವು–ಎಂಬ ದೃಷ್ಟಿಯನ್ನು ಶರಣರು ತಮ್ಮ ಧಾರ್ಮಿಕ ವಿವೇಚನೆಯಲ್ಲಿ ವ್ಯಕ್ತಪಡಿಸಿದರು. ಆದುದರಿಂದಲೇ ಅನೇಕ ವೇಳೆ ಅವರು ಧರ್ಮದ ಹೆಸರಿನಲ್ಲಿ ಬೆಳೆದುಬಂದ ವ್ಯರ್ಥ ಆಚಾರಗಳನ್ನೂ ಸಂಪ್ರದಾಯಗಳನ್ನೂ ಅವುಗಳನ್ನು ಎತ್ತಿ ಹಿಡಿದಿರುವ ಗ್ರಂಥಗಳನ್ನೂ ಕಟುವಾಗಿ ಖಂಡಿಸಿದ್ದಾರೆ.

“ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ.
ತರ್ಕದ ಬೆನ್ನ ಬಾರನೆತ್ತುವೆ,
ಆಗಮದ ಮೂಗ ಕೊಯ್ಯುವೆ ನೋಡಯ್ಯ
ಮಹಾದಾನಿ ಕೂಡಲ ಸಂಗಮದೇವಾ
ಮಾದಾರ ಚನ್ನಯ್ಯನ ಮನೆಯ ಮಗ ನಾನಯ್ಯ”

ಇತ್ಯಾದಿ ಅನೇಕ ಮಾತುಗಳನ್ನು ಉದಾಹರಿಸಬಹುದು. ಇಲ್ಲಿ ಖಂಡನೆ ಮುಖ್ಯವಲ್ಲ. ಬಸವಣ್ಣನವರು ವೇದಶಾಸ್ತ್ರ ಆಗಮಾದಿಗಳ ನಿಂದಕರಲ್ಲ. ಆದರೆ ಅವುಗಳ ಹೆಸರಿನಿಂದ ಬೆಳೆದುಬಂದ ಅನೇಕ ಸಂಪ್ರದಾಯಗಳನ್ನು ತೊಡೆದುಹಾಕಲು ಪ್ರಯತ್ನಿಸಿದರು. ಯಾವುದೇ ಧರ್ಮಗ್ರಂಥಗಳಾಗಲೀ ಅವುಗಳಿಂದ ಶಾಶ್ವತವಾದ ಸನಾತನ ತತ್ವಗಳನ್ನು ವಿವೇಚನೆಯಿಂದ ಅರಿತು ಅಳವಡಿಸಿಕೊಳ್ಳಬೇಕೇ ಹೊರತು ಕಾಲದ ಪರಿಮಿತಿಗೆ ಒಳಗಾಗಿರುವ ಯುಗ ಧರ್ಮಗಳನ್ನೇ ಅತಿಯಾಗಿ ಬೆಳೆಸಿ ವಿಕೃತಾ ಚರಣೆಗೆ ಕಾರಣರಾಗಬಾರದೆಂಬುದು ಈ ಖಂಡನೆಯ ಹಿಂದಿರುವ ಮನೋಧರ್ಮ. ವೇದಗಳ ಕರ್ಮಕಾಂಡವನ್ನು ಬಿಟ್ಟು ಮುಂದೆ ಹೋದ ಉಪನಿಷತ್ತುಗಳೂ ಇದೇ ಮನೋಧರ್ಮವನ್ನು ವ್ಯಕ್ತಪಡಿಸಿವೆ. “ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋಭವಾರ್ಜುನ” ಎಂದು ಗೀತೆಯಲ್ಲಿ ಹೇಳಿದ ಕೃಷ್ಣನದೂ ಇದೇ ದೃಷ್ಟಿ. ಶರಣರ ಮಾತುಗಳೂ ಸಹ ಇದೇ ಮಾರ್ಗದಲ್ಲಿ ನಡೆದು ಸ್ವತಂತ್ರ ವಿಚಾರಶಕ್ತಿ ಪ್ರಚೋದಕವಾದುವು.

ವಿಚಾರದಷ್ಟೇ ಮಹತ್ವವನ್ನು ಶರಣರು ಆಚಾರಕ್ಕೂ ಕೊಟ್ಟರು. ವಿಚಾರ ಸಾರ್ಥಕವಾಗುವುದು ಆಚಾರದಲ್ಲಿ ಅಳವಟ್ಟಾಗ ಮಾತ್ರ. ಅಂತೆಯೇ ಶರಣರ ವಿಚಾರ, ಕೇವಲ ಬೌದ್ಧಿಕ ತರ್ಕ ಜಿಜ್ಞಾಸೆಯಲ್ಲಿ ಉಳಿಯಲಿಲ್ಲ. ಆಚಾರದಲ್ಲಿ ಪರ್ಯವಸಾನವಾಯಿತು. ಯಾವುದನ್ನು ನುಡಿಯಲ್ಲಿ ಹೇಳಿದರೋ ಅದನ್ನು ನಡೆಯಲ್ಲಿ ತಂದು ತೋರಿಸಿದರು. ಬಸವಣ್ಣನವರು ತಮ್ಮ ಸಾಧನೆಯನ್ನು ಕುರಿತು ಹೇಳಿರುವ ಮಾತುಗಳನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. “ವಿಚಾರವೆಂಬ ಹೂವಾಯಿತ್ತು, ಆಚಾರವೆಂಬ ಕಾಯಾಯಿತ್ತು, ನಿಷ್ಪತ್ತಿಯೆಂಬ ಹಣ್ಣಾಯಿತ್ತು. ಆ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ”. ಈ ಮಾತುಗಳು ತುಂಬಾ ಅರ್ಥವತ್ತಾದುವು. ವಿಚಾರ ಆಚಾರಗಳ ಸಮನ್ವಯದಿಂದ ಅಂತರಂಗದ ಅರಿವು ಪರಿಪಕ್ವವಾಗಬೇಕಾಗುತ್ತದೆ. ಸಾಧಕನ ಜೀವನ ಆಗ ನಿಷ್ಪತ್ತಿ ಎಂಬ ಹಣ್ಣಾಗುತ್ತದೆ, ಕೂಡಲ ಸಂಗನನ್ನು ಸೇರುತ್ತದೆ.

ಧರ್ಮ ಈ ನಿಲುವಿಗೆ ನಮ್ಮನ್ನು ಕೊಂಡೊಯ್ಯಬೇಕಾದರೆ ವಿಚಾರದಲ್ಲಿ ಸ್ವತಂತ್ರಶೀಲತೆ ಇರುವಂತೆ ಆಚಾರದಲ್ಲಿ ಏಕೈಕ ನಿಷ್ಠೆ ಬೇಕು. ಮುಕ್ತ ಮನಸ್ಸಿನ ವಿಚಾರದಿಂದ ಒಂದು ನಿರ್ಧಾರಕ್ಕೆ ಬಂದ ಮೇಲೆ ಅದನ್ನು ಅಚಲವಾಗಿ ಹಿಡಿದು

ನಿರ್ವಹಿಸುವ ನಿಷ್ಠೆ ಇಲ್ಲದಿದ್ದರೆ ಏನನ್ನೂ ಸಾಧಿಸಲಾಗುವುದಿಲ್ಲ. ಈ ದೃಷ್ಟಿಯಿಂದ ಶರಣರು ನಿಷ್ಠೆಗೆ ಮಹತ್ವದ ಸ್ಥಾನವನ್ನು ಕೊಟ್ಟರು.

"ಎನಿಸೆಂದೊಡೆ ನಾ ಧೃತಿಗೆಡೆನಯ್ಯಾ;
ಎಲುದೋರಿದರೆ, ನರಹರಿದರೆ, ಕರುಳು ಕುಪ್ಪಳಿಸಿದರೆ
ನಾಧೃತಿಗೆಡೆನಯ್ಯಾ.
ಸಿರ ಹರಿದು ಅಟ್ಟೆ ನೆಲಕ್ಕೆ ಬಿದ್ದರೆ
ನಾಲಿಗೆ 'ಕೂಡಲಸಂಗ ಶರಣು' ಎನ್ನುತ್ತಿದ್ದಿತಯ್ಯಾ"

ಎಂಬಂತಹ ಕಠೋರ ನಿಷ್ಠೆಯ ನೂರಾರು ಮಾತುಗಳನ್ನು ಅಂತಹ ಸನ್ನಿವೇಶಗಳಲ್ಲಿ ಹಾಗೆಯೇ ನಡೆದುಕೊಂಡ ಆಚರಣೆಯನ್ನು ಶರಣರಲ್ಲಿ ಕಾಣುತ್ತೇವೆ.

ಹೀಗೆ ಶರಣರ ಧಾರ್ಮಿಕ ಸಾಧನೆಯಲ್ಲಿ ಮುಖ್ಯವಾದ ಮೂರು ಅಂಶಗಳನ್ನು ಗುರುತಿಸಬಹುದು. ಸ್ವತಂತ್ರ ವಿಚಾರ ಮಾರ್ಗದಿಂದ ಮೊದಲು ಗುರಿಯೇನೆಂಬುದನ್ನು ವಿವೇಚಿಸಬೇಕು; ಅಂಗೀಕರಿಸಿದ ಅಂಶಗಳನ್ನು ಆಚರಣೆಗೆ ತರಬೇಕು; ಮತ್ತು ಆಚರಣೆಯ ಮಾರ್ಗದಲ್ಲಿ ಒದಗುವ ಕಷ್ಟ ನಿಷ್ಠುರಗಳನ್ನು ಎದುರಿಸಿ ಗೆಲ್ಲಬೇಕು.— ಎಂಬ ಈ ಮೂರು ತತ್ವಗಳು ಮುಪ್ಪುರಿಗೊಂಡವು. ವಿಚಾರ ಆಚಾರನಿಷ್ಠೆ ಇವು ಬಹುಶಃ ಎಲ್ಲ ಕಾಲಕ್ಕೂ ಎಲ್ಲ ದೇಶಕ್ಕೂ ಅನ್ವಯವಾಗುವ ಶಾಶ್ವತ ತತ್ವಗಳು. ಈ ಮೂರರಲ್ಲಿಯೂ ಶರಣರು ತಮ್ಮ ಸಾಧನೆಯಿಂದ ಅಪೂರ್ವವಾದುದನ್ನು ಸಾಧಿಸಿದರು.

ಶರಣರ ವಿಚಾರಶೀಲತೆ, ಧರ್ಮಕ್ಕೊಂದು ಹೊಸ ಚೈತನ್ಯವನ್ನು ತಂದು ಕೊಟ್ಟಿತು. ಸೃಷ್ಟಿ ನಿರ್ಮಾಣ, ಸೃಷ್ಟಿಕರ್ತ, ಸೃಷ್ಟಿಗೆ ಕಾರಣ-- ಈ ಮೊದಲಾದುವನ್ನು ಕುರಿತು ಅವರು ವಿವೇಚಿಸಿದ್ದರೂ ಅವೇ ಧರ್ಮದ ಸರ್ವಸ್ವವೆಂಬಂತೆ ಅವಕ್ಕೆ ಅತಿಯಾದ ಮಹತ್ವ ಕೊಡಲಿಲ್ಲ. ತಮ್ಮ ಜೀವನ ಮೀಮಾಂಸೆಗೆ ಶಕ್ತಿಪೂರ್ಣವಾದ ಹಿನ್ನೆಲೆಯಾಗಿ ಮಾತ್ರ ಅದನ್ನು ರೂಪಿಸಿಕೊಂಡುದು ಅವರ ಗಮನಾರ್ಹ ಸಾಧನೆಯಾಗಿದೆ.

ಈ ಜಗತ್ತು ತ್ಯಾಜ್ಯವಾದುದಲ್ಲ. ಈ ಜೀವನ ಒಂದು ಕನಸೆಂದು ಹೇಗೋ ಬಾಳುವಂತಿಲ್ಲ. ಇದು ಪವಿತ್ರವಾದದ್ದು. ಅರಿವನ್ನು ಪಡೆಯಲು ಈ ಮಾನವ ಜನ್ಮ ಅನಿವಾರ್ಯವಾದ ಸಾಧನ. ಹಾಗಾಗುವಂತೆ ಬಳಸಿಕೊಂಡಾಗಲೇ ಇದರ ಸಾರ್ಥಕತೆ--ಇದು ಶರಣರು ಜೀವನವನ್ನು ಕಂಡ ಮೂಲಭೂತವಾದ ದೃಷ್ಟಿ. ಇಹ-ಪರಗಳೆರಡಕ್ಕೂ ಇದ್ದ ಅಂತರವನ್ನು ಶರಣರು ತೊಡೆದುಹಾಕಿದರು.

"ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ,
ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ,
ಕೂಡಲ ಸಂಗಮದೇವಾ"

ಎಂಬುದು ಬಸವಣ್ಣನವರ ಪ್ರಸಿದ್ಧವಾದ ಮಾತು; ಬಹಳ ಅರ್ಥಪತ್ತಾದುದೂ ಹೌದು. ಇಲ್ಲಿ ಚಲಾವಣೆಯಲ್ಲಿಲ್ಲದ ನಾಣ್ಯ ಪರಲೋಕದಲ್ಲಿಯೂ ಚಲಾವಣೆಯಲ್ಲಿ ಬರಲಾರದು ಅಂದರೆ ಇಲ್ಲಿ ಬಾಳಲಾರದವನು ಅಲ್ಲಿಯೂ ಬಾಳಲಾರ. --ಹೀಗೆ ಶರಣಧರ್ಮ ಸಂಸಾರವನ್ನು ತಿರಸ್ಕರಿಸದೇ ಅದನ್ನು ಪವಿತ್ರವೆಂದು ಭಾವಿಸಿತು. ಸಂಸಾರದ ಸುಖಗಳಾವುವೂ ತ್ಯಾಜ್ಯವಲ್ಲ. "ಭಕ್ತನ ಮನ ಹೆಣ್ಣಿನೊಳಗಾದರೆ ವಿವಾಹವಾಗಿ ಕೂಡುವುದು; ಭಕ್ತನ ಮನ ಮಣ್ಣಿನೊಳಗಾದರೆ ಕೊಂಡು ಆಲಯವ ಮಾಡುವುದು" -ಎಂದು ಮುಂತಾಗಿ ಧರ್ಮಬದ್ಧವಾಗಿ ಅವುಗಳನ್ನು ಪಡೆಯಬೇಕೆನ್ನು ತ್ತಾರೆ. ಅಸಹಜ ವೈರಾಗ್ಯ ಎಂದಿದ್ದರೂ ಅಪಾಯಕಾರಿ. "ಇಂದ್ರಿಯ ನಿಗ್ರಹವ ಮಾಡಿದರೆ ಹೊಂದುವುವು ದೋಷಂಗಳು" ಎಂದು ಬಸವಣ್ಣನವರು ಹೇಳಿರುವುದು ಈ ಅರ್ಥದಲ್ಲಿಯೇ. ಇಂದ್ರಿಯಗಳನ್ನು ಬಳಲಿಸದೇ ಲೌಕಿಕ ಸುಖದ ಮಿತಿಯನ್ನು ಅವು ಕಂಡುಕೊಳ್ಳುವಂತೆ ಮಾಡಿ, ಅವುಗಳ ಬಯಕೆಯನ್ನು ಉದಾತ್ತೀಕರಣ ಗೊಳಿಸಬೇಕೆಂಬುದು ಶರಣ ಧರ್ಮದ ಸಂದೇಶ.

ಇಹ ಪರಗಳ ಸಮನ್ವಯದಂತೆ ವ್ಯಷ್ಟಿ ಸಮಷ್ಟಿಗಳ ಸಾಮರಸ್ಯವನ್ನೂ ಶರಣರು ಸಾಧಿಸಿದರು. ವ್ಯಕ್ತಿ ಮತ್ತು ಸಮಾಜ ಬೇರೆ ಬೇರೆಯಲ್ಲ. ಇವೆರಡೂ ಪರಸ್ಪರ ಅವಲಂಬಿಗಳು. ಇವೆರಡರ ಹಿತವನ್ನು ಸಾಧಿಸುವುದೇ ಪೂರ್ಣ ಧರ್ಮ. ವ್ಯಕ್ತಿ ಕೇವಲ ತನ್ನ ಉದ್ಧಾರವನ್ನು ಮಾತ್ರ ಪರಿಗಣಿಸಿ ಸಮಾಜವನ್ನು ಕಡೆಗಣಿಸಿ ದರೆ ಅಷ್ಟರಮಟ್ಟಿಗೆ ಆತ ಅಪೂರ್ಣ. ಸಮಾಜದ ಹಿತವೇ ಮುಖ್ಯವೆಂದು ತನ್ನ ವಿಕಾಸವನ್ನೇ ಮರೆತರೆ ಇದೂ ಕೈತಪ್ಪುತ್ತದೆ; ಅದೂ ಕೈಸೇರುವುದಿಲ್ಲ. ಸಮಾಜ ಮತ್ತು ವ್ಯಕ್ತಿ ಇವೆರಡೂ ಜೊತೆಜೊತೆಯಲ್ಲಿಯೂ ಬೆಳೆಯಬೇಕೆಂಬ ಪೂರ್ಣ ದೃಷ್ಟಿಯ ಮಾರ್ಗವನ್ನು ಶರಣರು ಸಾಧಿಸಿ ತೋರಿಸಿದರು. ಆದುದರಿಂದಲೇ ಶರಣರ ಧಾರ್ಮಿಕ ಸಂದೇಶ, ಆಧ್ಯಾತ್ಮಿಕ ಲೌಕಿಕ ಜಗತ್ತುಗಳೆರಡನ್ನೂ ವ್ಯಾಪಿಸಿತು

ಧರ್ಮದ ಹೆಸರಿನಲ್ಲಿ ನಿರ್ಮಿತವಾದ ಕುಲ ಜಾತಿ ವರ್ಣಾದಿ ವಿಭೇದಗಳನ್ನು ಶರಣರು ಒಪ್ಪಿಲಿಲ್ಲ. ಗಂಡು ಹೆಣ್ಣು ಎಂಬ ತಾರತಮ್ಯವನ್ನು ತೊಡೆದುಹಾಕಿದರು. ಹುಟ್ಟಿನಿಂದ ಜಾತಿ ಬರುವುದಿಲ್ಲ; ಗುಣದಿಂದ ಅದು ಸಿದ್ಧವಾಗುತ್ತದೆ. "ಕೊಲ್ಲುವನೆ ಮಾದಿಗ, ಹೊಲಸು ತಿಂಬುವನೆ ಹೊಲೆಯ" ಎಂಬುದು ಬಸವಣ್ಣ ನವರ ಘೋಷಣೆ. "ಸಕಲ ಜೀವಾತ್ಮರಿಗೆ ಲೇಸನು ಬಯಸುವ ಶರಣರೇ ಕುಲಜರು" ಎಂಬುದು ಅವರ ಸೂತ್ರ. ಜಾತಿಮತಗಳನ್ನಳಿಯುವ ಏಕೈಕ ಸೂತ್ರವಾಗಿ ಎಂದೆಂದಿಗೂ ಉಳಿಯಬಲ್ಲುದು. ಇದನ್ನು ಪ್ರತಿಪಾದಿಸಿದುದು ಮಾತ್ರವಲ್ಲದೆ ಆಚರಣೆಗೂ ತಂದರು. ಮಾದಿಗರ ಹರಳಯ್ಯನ ಮಗನಿಗೆ ಬ್ರಾಹ್ಮಣ ಮಧುವರಸನ ಮಗಳನ್ನು ಕೊಟ್ಟು ಮದುವೆ ಮಾಡಿಸಿದರು. ಅಂದಿನ ಸಮಾಜ ಇದನ್ನು ಅರಗಿಸಿ

ಕೊಳ್ಳಲಾರದೇ ಹೋಯಿತು. ಕ್ರಾಂತಿಯಲ್ಲಿ ಅದು ಪರ್ಯವಸಾನವಾಯಿತು. ಸರ್ವ ಸಮಾನತೆ ಸರ್ವೋದಯಗಳೇ 'ಯುಗ ಮುನೋಧರ್ಮ'ವಾಗಿರುವ ಈ ಆಧುನಿಕ ಯುಗ, ಬಸವಣ್ಣನವರ ಆಶಯವನ್ನು ಹೆಚ್ಚು ಸಮಂಜಸವಾಗಿ ಅರ್ಥಮಾಡಿಕೊಳ್ಳ ಬಹುದು.

ಸಮಾಜದಲ್ಲಿ ರೂಢಮೂಲವಾಗಿದ್ದ ಮೇಲುಕೀಳುಗಳನ್ನು ತೊಡೆದು ಹಾಕಿ ಎಲ್ಲರಿಗೂ ಉದ್ಧಾರಕ್ಕೆ ಕಾರಣವಾಗುವ ಮಾರ್ಗವನ್ನು ರೂಪಿಸಬೇಕೆಂಬುದೇ ಬಸವಾದಿ ಶರಣರ ಮಹೋದ್ದೇಶವಾಗಿತ್ತು. ಅದಕ್ಕಾಗಿ ಅವರು ಉದ್ಯೋಗದಲ್ಲಿ ಶ್ರದ್ಧೆಯನ್ನೂ ಸಮಾನ ಗೌರವವನ್ನೂ ಮೂಡಿಸಿದರು. ದೈಹಿಕ ಶ್ರಮದಿಂದ ದುಡಿಯದೆ ಬದುಕುವ ಹಕ್ಕು ಯಾರಿಗೂ ಇಲ್ಲ. ಈ ದುಡಿಮೆಯ ಜೊತೆಗೆ ತನ್ನ ಸ್ವರೂಪವನ್ನು ಕಂಡುಕೊಳ್ಳುವ ಆತ್ಮಸಾಧನೆಯತ್ತಲೂ ಆತ ನಡೆಯಬೇಕು. ದುಡಿಮೆ ಮತ್ತು ಆರಾಧನೆ ಪ್ರತಿಯೊಬ್ಬ ವ್ಯಕ್ತಿಗೂ ಅಗತ್ಯ. ಇವುಗಳಿಂದ ತನ್ನ ವಿಕಾಸವನ್ನು ತಾನೇ ಸಾಧಿಸಿಕೊಳ್ಳಬೇಕು.

ದುಡಿಮೆ ಮತ್ತು ಆರಾಧನೆ ಈ ಎರಡರ ಸಮನ್ವಯವನ್ನೇ ಶರಣರು 'ಕಾಯಕ' ಎಂದು ಕರೆದರು. ತನುವ ಬಳಲಿಸಿ ದುಡಿಯಬೇಕು; ಆ ದುಡಿಮೆಯಿಂದ ಬಂದದ್ದನ್ನು ಗುರು, ಲಿಂಗ, ಜಂಗಮ ಈ ತ್ರಿವಿಧ ದಾಸೋಹಕ್ಕೆ ಅರ್ಪಿಸಬೇಕು. ಹೀಗೆ ದಾಸೋಹಭಾವದಿಂದ ಅರ್ಪಿಸಿದಾಗಲೇ ದುಡಿಮೆ ಕಾಯಕವಾಗುತ್ತದೆ. ಈ 'ಕಾಯಕ' ಎಂಬ ಮಾತಿಗೆ ಶರಣರು ತಮ್ಮ ಆಚಾರ ವಿಚಾರಗಳಿಂದ ಅಪಾರವಾದ ಅರ್ಥವ್ಯಾಪ್ತಿಯನ್ನು ತಂದುಕೊಟ್ಟರು. ಶರಣಧರ್ಮದ ಸಂದೇಶವನ್ನೆಲ್ಲಾ ಈ ಒಂದು ಮಾತಿನಲ್ಲಿ ಅಡಕಗೊಳಿಸಬಹುದು. ವ್ಯಕ್ತಿ, ಸಮಾಜ ಮತ್ತು ಅವುಗಳ ಪರಸ್ಪರ ಸಂಬಂಧದಿಂದ ಸಾಧಿಸುವ ವಿಕಾಸ-ಇವುಗಳನ್ನಳೆಯುವ ಮತ್ತು ಬೆಳೆಯುವ ತ್ರಿವಿಕ್ರಮನಾಗಿ ಪರಿಣಮಿಸಿತು ಮೂರಕ್ಷರಗಳ ಈ ಪದ.

ಒಟ್ಟಿನಲ್ಲಿ ಶರಣರು ಸಾರಿದ್ದು ಆಧುನಿಕ ಯುಗಕ್ಕೆ ಅನುಗುಣವಾದ ಸಮತಾ ಮಾರ್ಗ; ಸಮನ್ವಯ ಮಾರ್ಗ. ಆಚಾರ ವಿಚಾರಗಳ ಸಮನ್ವಯ; ಭಕ್ತಿಜ್ಞಾನ ಕರ್ಮಗಳ ಸಮನ್ವಯ; ಭೇದ ಅಭೇದಗಳ ಸಮನ್ವಯ; ವ್ಯಕ್ತಿಸಮಾಜಗಳಲ್ಲಿ ಸಮನ್ವಯ; ಹೀಗೆ ಎಲ್ಲವನ್ನೂ ಸಮಗ್ರ ದೃಷ್ಟಿಯಿಂದ ನೋಡಿದ ಶರಣರು ವ್ಯಕ್ತಿಯ ಮತ್ತು ಸಮಾಜ ಜೀವನದಲ್ಲಿ ಪೂರ್ಣತೆಯನ್ನು ಸಾಧಿಸುವ ಮಾರ್ಗವನ್ನು ರೂಪಿಸಿದರು. ಅವರ ವಚನಗಳಲ್ಲಿ ಹೊರಹೊಮ್ಮಿರುವ ಸಂದೇಶ ಬತ್ತದಿಹ ಒರತೆಯಂತೆ. ಮೊಗೆದಷ್ಟೂ ಅದರಿಂದ ಹೊಸಹೊಸ ಅರ್ಥ, ನಮ್ಮಕಾಲಕ್ಕೆ ಮತ್ತು ನಮ್ಮ ಅನುಭವಕ್ಕೆ ಅನುಗುಣವಾಗಿ ಲಭಿಸುತ್ತದೆ.

# "ಆನಂದಕಂದರಿಗೆ ನಮನ"

—ಪ್ರೊ. ವಸಂತ ಕುಷ್ಟಗಿ

900 ರಿಂದ 1981ರ ವರೆಗೆ ಅವ್ಯಾಹತವಾಗಿ 81 ವರ್ಷಗಳ ಕಾಲ ಕರ್ನಾಟಕ ಸಾಹಿತ್ಯ ಸಂಸ್ಕೃತಿಗಳ ಸಂವರ್ಧನೆಗಾಗಿ ಮೀಸಲಿಟ್ಟ ಮೇರುಮಂದಾರ ಶ್ರೀ ಬೆಟಗೇರಿ ಕೃಷ್ಣಶರ್ಮ. ಬಡತನದ ಬೇಗೆಯಲ್ಲಿ ಅಪ್ಪಟ ಬಂಗಾರವಾಗಿ ನಾಡಿನ ತರುಣರನ್ನು ಬೆಳೆಸುವುದರಲ್ಲಿ ಸಂತೋಷವನ್ನು ಪಡೆದು ಆನಂದವನ್ನು ಪಡೆದು "ಆನಂದಕಂದ"ರಾದವರು. ತಮ್ಮ ದುಃಖವನ್ನು ತಮ್ಮ ಪಾಡಿಗೆ ಇಟ್ಟುಕೊಂಡು, ತಮ್ಮ ಸಂತೋಷವನ್ನು ನಾಡಿನ ಜನತೆಗೆಲ್ಲ ಹಂಚಿಕೊಟ್ಟ ಹೃದಯಶ್ರೀಮಂತರು. ಸಾಹಿತ್ಯದಲ್ಲಿ ಕಲ್ಪಕತೆ ಹೆಚ್ಚು ಎಂದು ತಿಳಿದುಕೊಂಡ ಭಾವಜೀವಿಗಳಿಗೆ, ಸಾಹಿತ್ಯದಲ್ಲಿ ಪ್ರಾಮಾಣಿಕತೆಯೇ ಜೀವಾಳವೆಂಬುದನ್ನು ಸಾಕ್ಷರಿಸಿ ತೋರಿಸಿಕೊಟ್ಟ ರಸಋಷಿಗಳು ಇವರು. ಯಾವ ಕೆಲಸವನ್ನೇ ಮಾಡಲಿ ಆ ಕೆಲಸದಲ್ಲಿ ಅಚ್ಚುಕಟ್ಟುತನ, ನಿಷ್ಠೆ, ಶುದ್ಧ ವೃತ್ತಿಗಳನ್ನೇ ಧೃಡೀಕರಿಸುವ ರೀತಿ ಕನ್ನಡತನದ ಕೆಚ್ಚಿನ ಕನ್ನಡಿಯೇ ಅವರು. ಸ್ವಾಭಿಮಾನ ಮತ್ತು ಕರ್ತೃತ್ವ ಶಕ್ತಿಯ ನೆಲೆವೀಡಾಗಿದ್ದ ಅವರ ವ್ಯಕ್ತಿತ್ವ ಎಂದೆಂದಿಗೂ ಆದರ್ಶಮಯ. ಎಲ್ಲಕ್ಕೂ ವಿಶೇಷವೆಂದರೆ ಜಾನಪದ ಹೃದಯದ ಕಣ ಕಣವೂ ಇವರ ಹೃದಯಶ್ರೀ ಆಗಿದ್ದ ದಾಸ ಸಾಹಿತ್ಯದ ಜಂಗಮ ವಿಶ್ವವಿದ್ಯಾಲಯವೇ ಅವರು ಆಗಿದ್ದರು.

81 ವರ್ಷದ ತುಂಬು ಜೀವನದ ಆನಂದಕಂದರಲ್ಲಿ ಬಹುವಿಧ ಪ್ರತಿಭೆಯ ಮೈಲುಗಲ್ಲುಗಳನ್ನು ಕಾಣಬಹುದಾಗಿದೆ. ಅವರು ತಮ್ಮ 18ನೆಯ ವಯಸ್ಸಿನೊಳಗಾಗಿ ತಂದೆತಾಯಿಗಳನ್ನು ಕಳೆದುಕೊಂಡು ಬಹು ಕಷ್ಟಗಳನ್ನು ಅನುಭವಿಸಬೇಕಾಯಿತು. ಆದರೆ ಪ್ರಯತ್ನವೇ ದೇವರು ಎಂದು ನಂಬಿದ ಅವರು 1919ರಲ್ಲಿ ಕನ್ನಡ ದೀಕ್ಷೆಯನ್ನು ತೆಗೆದುಕೊಂಡು ನಾಡಿನ ನಾನಾ ಸಮಾರಂಭಗಳಿಗೆ ತಕ್ಕಂತಹ ಸ್ಫೂರ್ತಿದಾಯಕವಾಗುವಂತಹ ಗೀತೆಗಳನ್ನು ರಚನೆ ಮಾಡತೊಡಗಿದರು. 1906ರಲ್ಲಿ ಪ್ರಾಥಮಿಕ ಶಾಲೆಗೆ ಸೇರಿದ ಇವರು 1917ರಲ್ಲಿ ಮುಲ್ಕಿ ಪರೀಕ್ಷೆಯನ್ನು ಪಾಸು ಮಾಡಿ 1924ರ ವರೆಗೆ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಬೆಳಗಾಂವ ಜಿಲ್ಲೆಯ ಯಮಕನಮರಡಿ, ಬೆಳಗಾಂವಿ, ಮೂಡಲಗಿ, ಹುದಲಿಗಳಲ್ಲಿ ಕನ್ನಡನಾಡುನುಡಿಯ ಕೆಚ್ಚನ್ನು ಕೆರಳಿಸಿದರು. 1926ರಿಂದ ಒಂದೆರಡು ವರ್ಷ ಬೆಂಗಳೂರಿನ ಆರ್ಯ ವಿದ್ಯಾ ಶಾಲೆಯಲ್ಲಿ ಶಿಕ್ಷಕರೆಂದು ಕೆಲಸ ಮಾಡಿ ಅಲ್ಲಿಯೂ ನಾಡನುಡಿಯ ಸೇವೆಗಾಗಿ ಸ್ಫೂರ್ತಿಯನ್ನು ನೀಡಿ ಬರೆದು ಹಾಡಿದರು.

ಸಾಹಿತ್ಯ ಮತ್ತು ಸಂಸ್ಕೃತಿಗಳ ಮೌಲ್ಯಗಳ ಪ್ರಸಾರದ ಜೊತೆಗೆ ರಾಷ್ಟ್ರಾಭಿಮಾನವು ಕೂಡ ಆನಂದಕಂದರ ವ್ಯಕ್ತಿತ್ವದಲ್ಲಿ ಪೂರ್ಣತ್ವವನ್ನು ತಂದುಕೊಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಅಂತೆಯೇ ಅವರು ಅನೇಕ ರಾಷ್ಟ್ರಗೀತೆಗಳನ್ನೂ ನಾಡಗೀತೆಗಳನ್ನೂ ಬರೆದುದಲ್ಲದೆ, ಸ್ವರಾಜ್ಯ ಆಶ್ರಮದಲ್ಲಿ 1921ರ ಅವಧಿಯಲ್ಲಿ ಕೆಲವು ಕಾಲ ವಾಸವಾಗಿದ್ದು ಅಸಹಕಾರ ಚಳವಳಿಯಲ್ಲಿ ಪಾಲುಗೊಂಡುದಲ್ಲದೆ ಬೆಳಗಾಂವಿ ಕಾಂಗ್ರೇಸ ಅಧಿವೇಶನದ ಸ್ವಾಗತಗೀತೆಯನ್ನು ರಚನೆಮಾಡಿಕೊಟ್ಟು ಅನೇಕ ತರುಣರ ಹೃದಯದಲ್ಲಿ ರಾಷ್ಟ್ರೀಯತ್ವವನ್ನು ಬಿತ್ತಿದ ಕೀರ್ತಿ ಅವರದು. ಇದಲ್ಲದೆ ಡಾ|| ಶಂಬಾ, ಡಾ|| ದ. ರಾ. ಬೇಂದ್ರೆ, ಡಾ|| ಮಾಸ್ತಿ ಮೊದಲಾದ ಕರ್ನಾಟಕ ಪ್ರತಿಭಾ ಶ್ರೀಗಳ ಸ್ನೇಹವೂ ದೊರಕಿ ಅವರ ಕಾರ್ಯಚಟುವಟಿಕೆಗಳಲ್ಲಿ ಒಂದು ಬಗೆಯ ತೃಪ್ತಿದೊರೆಯಿತು.

ಎಳೆತನದಿಂದಲೇ ಸಾಹಿತ್ಯ ಸಂಶೋಧನೆಗಳ ಕಡೆಗೆ ಒಲಿದ ಅವರ ಮನಸ್ಸಿಗೆ ತಕ್ಕಂತೆ ಮಾತೃಭೂಮಿ ಸ್ವಧರ್ಮ, ನವಜೀವನ, ಜಯಕರ್ನಾಟಕ, ಜಯಂತಿ, ಮೊದಲಾದ ಪತ್ರಿಕೆಗಳು ಇವರ ಸಂಪಾದನಾ ಕುಶಲತೆಯಲ್ಲಿ ಅಮೂಲ್ಯ ಸೇವೆ ಸಲ್ಲಿಸಿದುವು. "ಜಯಂತಿ"ಯಂತೂ 1938 ರಿಂದ 1961ರ ವರೆಗೆ ಸುಮಾರು 22–23 ವರ್ಷಗಳ ಕಾಲ ಆನಂದಕಂದರ ಸಂಪಾದಕತ್ವದಲ್ಲಿ ಸೃಜನಶೀಲಸಾಹಿತ್ಯ ಸೃಷ್ಟಿಯಲ್ಲಿ ಅಸದಳವಾದ ಪಾತ್ರವಹಿಸಿರುವುದನ್ನು ಕನ್ನಡ ಸಾಹಿತ್ಯ ಸರಸ್ವತಿಯೂ ಮರೆಯುವಂತಿಲ್ಲ. ಆರಂಭದಲ್ಲಿ ನನ್ನ ಕವಿತೆಗಳಿಗೆ, ನನ್ನ ಕತೆಗಳಿಗೆ, ನನ್ನ ಕಿರುಗತೆಗಳಿಗೆ ತಮ್ಮ ಜಯಂತಿಯಲ್ಲಿ ಅವಕಾಶಕೊಟ್ಟು ನನ್ನಲ್ಲಿ ಆತ್ಮವಿಶ್ವಾಸವನ್ನು ಮೂಡಿಸಿದರು. ಬರಬರುತ್ತ ನನ್ನ ಜೀವನದ ಉದ್ದಕ್ಕೂ ಅವರ ಸಲಹೆಗಳು ದಾರಿದೀಪಗಳಾಗಿ ನನಗೆ ನಡೆಯಕಲಿಸಿವೆ–ನುಡಿಯಕಲಿಸಿವೆ. ನನ್ನಂತೆಯೇ ಅನೇಕರು ಅವರಿಂದ ಉತ್ಸಾಹವನ್ನು ಪಡೆದಿದ್ದಾರೆ. ಆತ್ಮವಿಶ್ವಾಸವನ್ನು ಬೆಳೆಸಿಕೊಂಡಿದ್ದಾರೆ. ಅಷ್ಟೇ ಅಲ್ಲ ಓದುಗರು ಜಯಂತಿಯು ಪ್ರಕಟವಾಗುತ್ತಿದ್ದಾಗ ಅದರ ಬರುವನ್ನು ಪ್ರತಿತಿಂಗಳು ಚಾತಕಪಕ್ಷಿಯಂತೆ ಕಾಯುತ್ತಿದ್ದರು. ನಾನು ನನ್ನ ಗೆಳೆಯರಂತೂ ವಿದ್ಯಾರ್ಥಿದೆಶೆಯಲ್ಲಿಯೇ ಚಂದಾದಾರರಾಗಿ ಅದರ ಪ್ರತಿಗಳನ್ನು ಗೌರವದಿಂದ ಓದುತ್ತಿದ್ದುವಲ್ಲದೇ ಅವುಗಳನ್ನು ಕಾಪಾಡಿಕೊಂಡು ಬಂದಿದ್ದೇವೆ. ಆಗಿನ ಲೇಖಕರಿಗೆ, ತಮ್ಮ ಲೇಖನಗಳು ಜಯಂತಿಯಲ್ಲಿ ಪ್ರಕಟವಾಗಿವೆ ಎಂದು ಗೊತ್ತಾದರೆ ಸಾಕು ಅದೊಂದು ಘನಗೌರವದ ಮಾತು. ಪ್ರಶಸ್ತಿಗೂ ಮಿಗಿಲಾದ ನೆಮ್ಮದಿಯನ್ನು ನೀಡುವ ಘಟನೆ.

ಯಶಸ್ವಿ ಸಂಪಾದಕ ಬೇಟಗೇರಿಯವರು ಯಶಸ್ವಿ ಸಂಘಟನಾಶೀಲರೂ ಆಗಿದ್ದರು. ಅನೇಕ ಸಂಘಸಂಸ್ಥೆಗಳಲ್ಲಿ ತಮ್ಮ ತಪಸ್ಸನ್ನು ಮುಟ್ಟಿಸಿ ಅವುಗಳ ಇತಿಹಾಸ
(39ನೇ ಪುಟ ನೋಡಿ)

# ಸ್ವಾವಲಂಬನೆ

—ದೊಡ್ಡಬಾಣಗೆರೆ ಪ್ರಕಾಶಮೂರ್ತಿ

ಬಾಪೂಜಿ ಎಂದು ಹೆಸರಾಗಿರುವ ಗಾಂಧೀತಾತನ ಬದುಕು ಬಂಗಾರವೆ ಸರಿ. ಗಾಂಧೀಜಿಯವರ ಜೀವನ ಸಾರ್ಥಕ. ಇವರಬಾಳಿನ ಹೆಜ್ಜೆ ಹೆಜ್ಜೆಗೂ ದೊರೆಯುವ ನಿಜ ನಡವಳಿಕೆಗಳು ಎಂತಹವರಿಗೂ ಚೇತನ ತಂದು ಮಾನವೀಯತೆಯನ್ನು ಕರುಣಿಸುತ್ತವೆ.

ತನ್ನ ಕೆಲಸವನ್ನು ತಾನೇ ಮಾಡಿಕೊಳ್ಳ ಬಯಸುತ್ತಿದ್ದ ಬಾಪೂಜಿಯವರು ಸ್ವಯಂಸೇವಕ. ತಮ್ಮ ಬಟ್ಟೆಯನ್ನು ತಾವೇ ತೊಳೆದು ಕೊಳ್ಳುತ್ತಿದ್ದರು. "ಇದರಿಂದ ಹಣ ಉಳಿಯುತ್ತದೆ. ವಿಳಂಬವಾಗದೆ ವಿರಾಮವಿದ್ದಾಗ ತೊಳೆದು ಮುಗಿಸಬೇಕು. ಮೇಲಾಗಿ ಬಟ್ಟೆ ಹೆಚ್ಚು ದಿನ ಬಾಳಿಕೆ ಬರುತ್ತದೆ" ಎನ್ನುತ್ತಿದ್ದರು. "ಗಡ್ಡ ಕೆರೆಸಿಕೊಳ್ಳಲು ಕೂಡ [ಪ್ರಿಟೋರಿಯಾದಲ್ಲಿ ಕಪ್ಪುಜನವೆಂದು ಕ್ಷೌರಿಕನಿಂದ ನಿರಾಕರಿಸಲ್ಪಟ್ಟ ಇವರು ] ನಾನೇ ಮಾಡಿಕೊಳ್ಳುವುದರಿಂದ ಹಣ ಉಳಿತಾಯವಷ್ಟೇ ಅಲ್ಲದೆ ಹೆಚ್ಚಿನ ಸಮಯವೂ ಉಳಿಯುವುದು"–ಎಂಬುದು ಇವರ ದಾರ್ಶನಿಕ ನಿದರ್ಶನ.

ಸಭೆಯೊಂದರಲ್ಲಿ ಭಾಗವಹಿಸಿ ಭಾಷಣ ಮಾಡಲು ಒಮ್ಮೆ ಕಲ್ಕತ್ತೆಗೆ ಹೋಗಿದ್ದರು. ಆಗ ಕಲ್ಕತ್ತಾ ನಗರದ ಜನತೆಗೆ ಅನಾರೋಗ್ಯ. ಅಲ್ಲಿ ಚೊಕ್ಕ ಮಾಡದ ಕಕ್ಕಸು ಗುಂಡಿಗಳು, ಕಸ ತುಂಬಿದ ಬೀದಿಗಳು. ಯಾರು ಈ ಅಶುಭ್ರದ ಬಗ್ಗೆ ಅಲ್ಲಿನವರು ಗಮನಕೊಡುತ್ತಿರಲಿಲ್ಲ. ಸಭಾಂಗಣದಲ್ಲಿ ಹಾಜರಿದ್ದ ಬಾಪೂಜಿಯವರು ಅಲ್ಲಿನ ಅಶುಚಿಯನ್ನು ನೋಡಿ ತಡೆಯಲಾಗದೆ ತಾವೇ ಒಂದು ಕಸಬರಿಕೆಯನ್ನು ಹುಡುಕಿ ಬೀದಿ ಗುಡಿಸಲು ನಿಂತರು. ಸಭೆಗೆ ನೆರೆದವರೆಲ್ಲರೂ ಬಂದು ಬೇಡಿದರು. ಆದರೂ ಬಾಪೂಜಿ ಗುಡಿಸುವುದನ್ನು ಬಿಡಲಿಲ್ಲ; ಚೊಕ್ಕಟ ಮಾಡಲು ತೊಡಗಿದ್ದ ಬಾಪೂಜಿಯವರೊಡನೆ ಎಲ್ಲರೂ ಮನಸವಿಟ್ಟು ಸಹಕರಿಸಿದರು. ಆಗ ಶುಚಿಯಷ್ಟೇ ಅಲ್ಲ ನಗರದ ಶೋಭಾಪ್ರಮಾಣವೇ ಜೀತಿಯಾಯಿತು. ನೈರ್ಮಲ್ಯ ಹೆಚ್ಚಿ ಅನಾರೋಗ್ಯ ಇಲ್ಲವಾಯಿತು.

ಹೀಗೆ ಭಾರತದ ಭಾಗ್ಯಜ್ಯೋತಿ ಬಾಪೂಜಿ ಮಹಾಸೀಯರ ಬದುಕು ಎಲ್ಲವನ್ನೂ ತಾನೇ ಮಾಡಿಕೊಂಡು ಸ್ವಾವಲಂಬಿಯಾಗುವ ಗುರಿ ಮಾನವನದಾಗಬೇಕೆಂಬುದನ್ನು ಬಾಳಿನ ಎಲ್ಲಾ ಬಗೆಯಲ್ಲಿಯೂ ಸಾರಿ ಹೇಳಿತು.

(ಸಂಗ್ರಹ)

# ಅಕ್ಕ ಮಿಂಚಕ್ಕ

ಹೇಳಿದವರು— ಶ್ರೀಮತಿ ಹೊನ್ನಮ್ಮ
ಸಂಗ್ರಹ—ಗೊ. ರು. ಚ

ಒಂದು ಪಟ್ಟಣ. ಪಟ್ಟಣದೊಗೊಬ್ಬ ದೊರೆ. ದೊರೆಗೆ ಏಳು ಜನ ಹೆಂಡ್ತಿದಿರು. ಎಷ್ಟು ವರ್ಷ ಕಳೆದರೂ ಒಬ್ಬರಿಗೂ ಮಕ್ಳಾಗಲಿಲ್ಲ. ಹಿಂಗೇ ಇರಬೇಕಾದ್ರೆ ಚಿಕ್ಕೋಳು ಬಸಿರಾದ್ಲು. ಅದೇನ್ಮಾಡ್ತು ರೋಷ್ಟು ಮಂಗ ಏನೂ ತಿ ಳೀ ದು. ಒಂದು ದಿವಸ ಎಲ್ಲಾ ಸವತಿದೀರು ನೀರಿಗೆ ಹೋದರು. ಅವ್ಳು ಹೊದ್ಲು. ದಿನ ತುಂಬಿತ್ತು ಅಲ್ಲೇ ಹೆತ್ತುಬಿಟ್ಲು. ಕಡ್ಲೆಕಾಯಿ ತಿಂದು ಸೊಪ್ಪಿನಾಗೆ ಮಗುವನ್ನು ಮುಚ್ಚಿಬಿಟ್ಟು ನೀರೆತ್ತಿಕೊಂಡು ಬಂದ್ಲು. ಇವಳ ಹೊಟ್ಟೆ ಇಳಿದಿದ್ದನ್ನು ಕಂಡ ದೊರೆ ಅಯ್ಯೋ ದೇವರೇ ಇವಳು ಬಸಿರು ಆಗವಳೆ ಅಂತಿದ್ದೆ, ಇವಳು ಇದಾಗವಳೆ ಅಯ್ಯೋ ಬಿಡು ಎಂದ ದೊರೆ.

ಮಗು ಅಲ್ಲೆ ಚಿಕ್ಕದು ದೊಡ್ಡದು ಆಯ್ತು. ಹದ್ದು ಗಿಣಿ ಮಗುವ ನೋಡ್ದೊ. ಅವೆರಡೂ ಸೇರಿ ಮಗೂನ ತಗೊಂಡು ಹೋಗಿ ಮರದಮೇಲೆ ಕುಂಡ್ರಿಸಿದೋ. ಅವು ಅಲ್ಲಿಂದ ಇಲ್ಲಿಂದ ಆರಾ ತಂದು ಚಿಕ್ಕದು ದೊಡ್ಡದು ಮಾಡ್ದೋ. ಮಗು ಯಾವಾಗ್ಲೂ ಹೊಟ್ಟೆ ಹಸೀತು ಹಸೀತು ಅಂತ ಬಡ್ಕೊಳ್ಳೋಕೆ ಸುರು ಮಾಡ್ತು. ಆಗ ಹದ್ದು ಗಿಣಿ ಒಂದು ಸಣ್ಣದೊಂದು ಪಟ್ಟಣಕ್ಕೆ ಹೋಗಿ ಬಟ್ಟೆ ಹೊಲಿಯೋನತ್ರ ಹೋಗಿ ಚಿಕ್ಕಚಿಕ್ಕ ಬಟ್ಟೆ ಚೂರುಗಳನ್ನು ಸೇರಿಸಿ ಜೋಳಿಗೆ ಹೊಲಿಸಿಕೊಂಡು ಬಂದು, ಕಾಡಿಗೆ ಹೋಗಿ ಬಿದಿರು ಬೆತ್ತ ತಂದು, ಅಂಗಡಿಗೆ ಹೋಗಿ ಒಂದು ವಿಭೂತಿ ಗಟ್ಟಿತಂದು ಮಗುವಿಗೆ ಕೊಟ್ವೊ. ವಿಭೂತೀನ ತಿಕ್ಕೆ ಮಕ್ಕೆ ಬಳಿದುಕೊಂಡು ಜೋಳಿಗೆ ಬೊಗಲಿಗೆ ಹಾಕಿಕೊಂಡು ಕೈಯಲ್ಲಿ ಬಿದಿರುಬೆತ್ತ ಹಿಡಕೊಂಡು ಪಟ್ಟಣಕ್ಕೆ ಹೋಗಿ ಬಿಕ್ಷೆ ಎತ್ತಿಕೊಂಡು ಬಂದು ತಿನ್ನು ಅಂತ ಅಂದೊ. ಆಗ ಆ ಮಗ ಮೈ ತೊಳ್ಕೊಂಡು ತಿಕ್ಕೆ ಮಕ್ಕೆ ವಿಭೂತಿ ಬಳ್ಕೊಂಡು ಜೋಳಿಗೆ ಬಗಲಿಗೆ ಹಾಕ್ಕೊಂಡು ಬೆತ್ತ ಹಿಡ್ಕೊಂಡು ಸೀದಾ ಯಾರ ಮನೆ ಹತ್ತಿರಾನೂ ಹೋಗದೆ ಅರಮನೆ ಮುಂದಕ್ಕೆ ಹೋಯ್ತು. ಹದ್ದು ಗಿಣಿನೂ ಮೇಲಾರಿಕೊಂಡು ಬಂದು ಅರಮನೆ ಪಲ್ಟಿನ ಮೇಲೆ ಕೂತ್ಕೊಂಡೊ.

ಇತ್ತ ಅವರಮ್ಮನ್ನ ಸವತಿದಿರು ಒಂದು ಕೊತ್ತತಿಗೆ ಹಾಕಿಬಿಟ್ಟು ತಗ್ಗಲು ಮುಗ್ಗಲು ರಾಗಿ ಹಾಕಿ ಬಾಗಿಲು ಹಾಕಿಬಿಟ್ಟರು. ಈ ಮಗ ಅರಮನೆ ಬಾಗಿಲಾಗೆ ನಿಂತ್ಕೊಂಡು ' ಈ ಊರ ದೊರೆಗೆ ಏಳುಜನ ಹೆಂಡ್ತಿದಿರು. ಚಿಕ್ಕೋಳು ಹೆಸ್ರು ಅಕ್ಕ ಮಿಂಚಕ್ಕ. ಕಡ್ಲೆಕಾಯಿ ತಿಂದು ಕಾಡಗೆತ್ತು ಹದ್ದು ಪ್ರಾಯ ಮುದ್ದಾತಿ ಗಿಣಿ ಪ್ರಾಯ ಕಚ್ಚಾತಿ ಇಕ್ಕರವು ಬಿಕ್ಷಾನಾ' ಅಂತ ಹೇಳ್ತು. ಆಗ ದೊರೆ ಮಗ ಹೇಳೋದನ್ನ ಕೇಳ್ಸಿಕೊಂಡು ಬಾಗಿಲಿಗೆ ಬಂದು ಅದೇನ್ಮಗ ಇನ್ನೊಂದು ಸಾರಿ ಹೇಳು ಅಂತ ಅಂದ. ಆಗ ಮಗ " ಊರ ದೊರೆಗೆ ಏಳುಜನ ಹೆಂಡ್ತಿದಿರು. ಚಿಕ್ಕೋಳ್

ಸಿದ್ಧಗಂಗಾ

ಹೆಸ್ರು ಅಕ್ಕ ಮಿಂಚಕ್ಕ. ಕಡ್ಲೆಕಾಯಿ ತಿಂದು ಕಾಡಗೆತ್ತು ಹದ್ದು ಪ್ರಾಯ ಮುದ್ಕಾತಿ ಗಿಣಿ ಪ್ರಾಯ ಕಚ್ಕಾತಿ ಇಕ್ಕರವ್ಳು ಬಿಕ್ಲಾಸನ" ಅಂತ ಹೇಳ್ತು. ಆಗ ದೊರೆ ಮನ ಸ್ಲಾಗೆ ಈ ಮಗ ಇನ್ನಾರೂ ಅಲ್ಲ, ನನ್ಮಗನೇ ಶಿವಾಯ ಅಂತ ಅಂದ್ಕೊಂಡು ಮಗನ ಒಳಕ್ಕೆ ಎತ್ಕೊಂಡೋದ. ಮೈ ತೊಳಿಸಿ ಹೊಸಬಟ್ಟೆ ಇಕ್ಕಿ ಹಾಲು ತುಪ್ಪ ಅನ್ನ ಇಕ್ಕಿದ. ಆಗ ಮಗ ನನ್ನೇನೋ ಒಳಕ್ಕೆ ಕರ್ಕೊಂಡು ಬಂದು ಹಾಲು ಅನ್ನ ಇಕ್ಕಿ ಬಿಟ್ಟೆರಿ. ನನ್ನ ಸಾಕಿ ಸಲಹಿದ ಹದ್ದು ಗಿಣಿಗಳು ಬಂದು ಪಲ್ಲಿನ ಮೇಲೆ ಕುಂತವೆ. ಅವಕ್ಕೆ ಏನ್ಮಾಡಬೇಕು ಅಂತ ಕೇಳ್ತು. ಆಗ ದೊರೆ ಬಾಳೆಹಣ್ಣು ತರ್ಸಿ ಸಕ್ಕರೆ ತರ್ಸಿ ಹಾಲಾಗೆ ಕಲ್ಸಿಸಿ ಎಂದು ಬಟ್ಲಗೆ ಹಾಕಿ ಪಲ್ಲಿನ ಮೇಲೆ ಇಕ್ಕಿದ. ಹದ್ದು ಗಿಣಿ ಅದನ್ನು ತಿಂದುಬಿಡ್ತು. ಇನ್ನೇನು ಭಯವಿಲ್ಲ, ಮಗ ಸೇರಬೇಕಾದ ಜಾಕ್ಕೆ ಸೇರ್ಸಿ ಬಿಟ್ರೂ ಅಂತ ಮಾತಾಡ್ಕೊಂಡು ಹೊರಟು ಹೋದೊ.

ಇಂಗೇ ದಿನ ಕಳೀತು. ಒಂದು ದಿನ ರಾಜ ಮಗುನ ನಿಮ್ಮವ್ವ ಎಲ್ಲಿ ಅಂತ ಕೇಳ್ದ ಆಗ ಮಗ ನಮ್ಮವ್ವ ಇರೋ ಜಾಗನ ತೋರ್ಸಿಕೊಡ್ತಿನಿ ಅಂತ ಎದ್ದುಬಂದು ಬಾಗಿಲ್ನ ಮೂರುಸ್ನಾರಿ ಒದ್ದ ಪಟ್ಟಗೆ ಕದ ಮುರಿದುಬಿತ್ತು. ಒಳಗೆ ನೋಡ್ತಾರೆ ಏನು ಮೂಗುತ್ತ ಬೆಳೆದುಕೊಂಡ್ಯತೆ. ನಗ ಮಗ ಕೈಮುಕ್ಕೊಂಡ್ ನಿಂತ್ಕೊಂಡು ನಮ್ಮ ತಾಯಿ ಒಳಗಿದ್ದರೆ ಪ್ರತ್ಯಕ್ಷವಾಗ್ಲಿ, ಪ್ರತ್ಯಕ್ಷವಾಗಿ ಕಾಣ್ಲಿ, ಇಲ್ದೇ ಇದ್ರೆ ಕಾಣಿಸ್‌ಬೇಡ ಅಂತ ಹೇಳಿ ನೂರೊಂದು ಬಿಂದಿಗೆ ನೀರ್ನ ಮೇಲೆ ಉಯ್ತಿದೆ. ಏನೂ ಒಳಗೆ ನೋಡ್ತಾರೆ ಬಿಳೀ ಗೂಬೆ ಹಾಗೆ ಬೆಳ್ಳಗೆ ನೋರೆಬುರುಡೆ ಅಸ್ಯತೆ. ಮೂಗುತ್ತದಗೆ ಎಪ್ಟೊಂದ್ ದಿವ್ಸ ಅಂತೆ ಇತ್ತದೆ. ಆಗ ಆ ಹುಡುಗ ಹಂಗೇ ಅಸಾ ಮತ್ತು ಎಬ್ಸಿಕೊಂಡು ಹೋಗಿ ಮಣೆ ಮೇಲೆ ಕುಂಡಿರ್ಸಿ ಬಿಸಿನೀರಾಗೆ ಮೈಯೆ ನ್ನೆಲ್ಲಾ ಕಿಲೀನು ಮಾಡ್ಸು. ನಮ್ಮ ತಾಯಿ ಪತಿವ್ರತೆ ಆಗಿದ್ರೆ ಮೊದಲ್ಲಂಗೆ ಮನು ಷ್ಯಳಾಗ್ಲಿ ಎಂದು ಕೈಮುಗಿದು ದೇವರನ್ನ ಬೇಡಿಕೊಂಡ. ಆಗ ಅವಳು ಮೊದಲ್ಲಂಗೆ ಆದ್ಲು. ತಾಯಿ, ಆಹಾ ! ನನ್ಮಗ ಇರಬೇಕಾದ್ರೆ ನನ್ನ ಪ್ರತ್ಯಕ್ಷ ಮಾಡಿ ಉದ್ದಾರ ಮಾಡ್ದ. ನಾನು ಮಗನನ್ನು ಹೆರ್ಲಿಲ್ಲ. ನನ್ನ ಉದ್ದಾರ ಮಾಡ್ದ ಅಂತ ತಾಯಿ ಮಗನನ್ನು ತಬ್ಬಿಕೊಂಡು ಗೊಳೋಂತ ಕಣ್ಣೀರು ಸುರಿಸಿದ್ಲು. ಇತ್ತ ಇವಳ ಸವತಿ ದಿರು ಆಹಾ ನಮ್ಮ ವಿಷಯ ರಾಜನಿಗೆ ಗೊತ್ತಾಗ್ಬಿಟ್ಟಿತು. ಇನ್ನ ಸುಮ್ಮನೆ ನಮ್ಮನ್ನ ಬಿಟ್ಟ್ಯಾನ ಅಂತ ಆರು ಜನಾನೂ ಹೊಟ್ಟೆಗೆ ಬಟ್ಟೆ ತುರುಕಿಕೊಂಡು ಬಸಿರಿ ಆಗಿ ದ್ದೇವೆಯಂತ ರಾಜನಿಗೆ ಸುದ್ದಿ ಮುಟ್ಟಿಸಿದರು. ನನ್ನ ಮಗ, ಚಿಕ್ಕ ಗೌಡ್ರ ಕಷ್ಟಕ್ಕೆ ಈ ಮುಂಡೇರೆ ಕಾರಣಾಂತ ರಾಜನಿಗೆ ಗೊತ್ತಾಗಿ ಅವರ ರುಂಡ ಕಡಿಯಂಗೆ ಸೇವಕರಿಗೆ ಅಪ್ಪಣೆ ಮಾಡ್ದ. ಆಗ ಅವರು ಗರ್ಬಿಣಿ ಆಗವ್ರೆ ಅಂತ ಹೇಳಿದ್ದು ಸುಳ್ಳಂತ ಗೊತ್ತಾಗಿ ಅವರನ್ನೆಲ್ಲಾ ನಡೂಕೆ ಸೀಳ್ಸಿ ಕಾಲು ಮ್ಯಾಲಕ್ಕೆ ಮಾಡಿ ತಲೆ ಕೆಳಕ್ಕೆಮಾಡಿ ಸಾಲಿಗೆ ತೋರಣ ಕಟ್ಟಿದಂಗೆ ಕಟ್ಟಿಸ್ದ. ತಾಯಿ, ಮಗ, ತಂದೆ ಸಂತೋಷವಾಗಿ ಐಶ್ವರ್ಯವಂತರಾಗಿ ಸುಖವಾಗಿ ಅವರು ಅಲ್ಲವ್ರೆ ನಾವು ಇಲ್ಲಿದ್ದೀವಿ.



# ನಾಡು ನುಡಿ ಪ್ರೇಮಿ —ಆನಂದಕಂದ

—ಎಸ್. ಎಸ್. ಗದಗಕರ

ಕನ್ನಡದ ಪ್ರೇಮ ಪಾಂಡಿತ್ಯ ರಸಿಕತೆ ಎಲ್ಲ
ಆಶ್ರಯಿಸಿದಂಥ ಹಿರಿ ಸಾಹಿತಿಗಳಿವರು;
ಜನ ಜೀವನದ ಅಮಿತ ಕಷ್ಟಕಾರ್ಪಣ್ಯಗಳು
ಇವರ ಕೃತಿಗಳಲೆಲ್ಲ ಮೈವೆತ್ತು ನಿಂದಿಹವು.

ಬಿದ್ದ ನಾಡಿನ ನುಡಿಯ ಸ್ಥಿತಿ ನೋಡಿ ಕಡುನೊಂದು
ಉದ್ವಿಗ್ನತೆಯು ಇವರ ಮನವನಾವರಿಸಿತ್ತು.
ನೆರೆ ನಾಡಿನವರೆದುರು ಕನ್ನಡದ ಸೊಬಗನ್ನು
ಬಣ್ಣಿಸಲು ಹಾಡಿದರು —ಎನಿತಿನಿದು!ಎಂದು

ಪತ್ರಿಕಾ ವ್ಯವಸಾಯ, ಕತೆ, ನಾಟಕಂಗಳಲು
ಸ್ಫುಟವಾಗಿ ಇಹುದಿವರ ಸಾಂಸ್ಕೃತಿಕ ದೃಷ್ಟಿ;
ಲಲಿತ ಕಲೆ, ಸಂಶೋಧನೆಗಳಂಥ ವಿಷಯದಲಿ
ಉತ್ಕಟಾಸಕ್ತಿ; ಅಚ್ಚರಿಯು ಅಲ್ತೆ?

ಪ್ರಾಚೀನ ಕನ್ನಡದ ಗಾಢ ಪರಿಚಯದಾತೆ
ಸಕ್ಕದದ ಮೇಲಿವರ ವಾತ್ಸಲ್ಯವೆಂತಹದು!
ಬುದ್ಧಿವಾತರನಿವರು ತರ್ಕದಲಿ ತಡೆದರೂ
ಪಾಮರರ ಬಗೆಗಿವರ ಮನವು ಕವಡುತಲಿತ್ತು.

ಸಾಹಿತ್ಯ, ಸಾಹಿತ್ಯವೆಂದಿವರು ಎಂದೆಂದು
ಹಗಲಿರುಳು ಗ್ರಂಥಗಳ ಹಿಡಿದು ಕುಳ್ಳಿರಲಿಲ್ಲ;
ಸಾಂಗೀತದಭಿರುಚಿಯು, ರಸವಂತತೆಯು ವಾಣಿ
ಒದವಿಸಿದುವಲ್ತೆ ಗೌರವವನಿವರಿಗೆ ಇಂದು?

[ದಿವಂಗತ ಶ್ರೀ ಬೆಟಗೇರಿ ಕೃಷ್ಣಶರ್ಮರ ಸಂಸ್ಮರಣೆಗಾಗಿ]

# ಬಡವರ ಆಹಾರ –ರಾಗಿ

—ಎನ್. ಗೋಪಾಲಕೃಷ್ಣ

ಕರ್ನಾಟಕದ ಬಹುಪಾಲು ಹಳ್ಳಿಗಳಲ್ಲಿ ರಾಗಿ ಪ್ರಮುಖ ಆಹಾರ ಧಾನ್ಯ. ಹಳ್ಳಿಗಳಷ್ಟೇ ಅಲ್ಲ, ನಗರ ಪ್ರದೇಶಗಳಲ್ಲೂ ರಾಗಿ ಪುಷ್ಟಿಕರ ಆಹಾರವೆಂದು ಪ್ರಚಲಿತ. ಶ್ರಮಜೀವಿಗಳೇ ಹೆಚ್ಚಾಗಿ ಉಪಯೋಗಿಸುವುದಾದರೂ, ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ವಿದ್ಯಾಭ್ಯಾಸ, ಉದ್ಯೋಗ ನಿಮಿತ್ತವಾಗಿ ಬಂದು ನೆಲೆಸುವ ಅನೇಕ ಜನರಿಗೆ ರಾಗಿಯನ್ನು ಅಷ್ಟು ಸುಲಭವಾಗಿ ಬಿಡಲಾಗುವುದಿಲ್ಲ. ರಾಗಿಮುದ್ದೆ ಇಂಥಾ ಜನರ ಬಲು ಪ್ರಿಯ ಅಹಾರ.

ಕರ್ನಾಟಕ, ಆಂಧ್ರ, ಮಹಾರಾಷ್ಟ್ರ ಮತ್ತು ತಮಿಳುನಾಡಿನ ಕೆಲವು ಭಾಗಗಳಲ್ಲಿ ರಾಗಿ ಬೆಳೆ ಇದೆ. 20–25 ಅಂಗುಲ ಮಳೆ ಬೀಳುವ ಪ್ರದೇಶಗಳು ರಾಗಿ ಬೆಳೆಗೆ ಸೂಕ್ತ. ಜೇಡಿ, ಕೆಂಪು, ಮರಳು ಮಣ್ಣುಗಳು ರಾಗಿ ಬೆಳೆಯಲು ಅನುಕೂಲ.

ರಾಗಿಯನ್ನು ಆಫ್ರಿಕನ್ ಮಿಲೆಟ್, ಫಿಂಗರ್ ಮಿಲೆಟ್ ಎಂದೂ ಕರೆಯುತ್ತಾರೆ. ಇದರ ತವರು ಆಫ್ರಿಕವೋ ಭಾರತವೋ ಎಂಬ ವಿವಾದ ಇದ್ದೇ ಇದೆ. ಕ್ರಿ. ಪೂ. 1800 ರಲ್ಲಿ ರಾಗಿ ಮೈಸೂರು ರಾಜ್ಯದಲ್ಲೇ ಇತ್ತೆಂಬ ದಾಖಲೆಗಳಿವೆ.

ಕರ್ನಾಟಕದಲ್ಲಿ 10 ಲಕ್ಷ ಹೆಕ್ಟೇರುಗಳಿಗೂ ಹೆಚ್ಚು ಪ್ರದೇಶದಲ್ಲಿ ಇದರ ಬೆಳೆ. ವಾರ್ಷಿಕ ಉತ್ಪಾದನೆ 14 ಲಕ್ಷ ಟನ್ನುಗಳು. ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಶೇ. 60 ಭಾಗ ಕೃಷಿ ಭೂಮಿಯಲ್ಲಿ ರಾಗಿ ಬೆಳೆಯಲಾಗುತ್ತಿದೆ. ಕರ್ನಾಟಕದಲ್ಲಿ ಮೈಸೂರು, ಮಂಡ್ಯ, ತುಮಕೂರು, ಚಿತ್ರದುರ್ಗ, ಹಾಸನ ಜಿಲ್ಲೆಗಳಲ್ಲಿ ರಾಗಿ ಪ್ರಮುಖ ಬೆಳೆ.

ರಾಗಿಯಲ್ಲಿ ಕಪ್ಪು, ಕೆಂಪು, ಬಿಳಿ ಬಣ್ಣದ ರಾಗಿಗಳಿವೆ. ಸುಣ್ಣ, ಕಬ್ಬಿಣಾಂಶ ಪ್ರೋಟೀನುಗಳು ಮತ್ತು 'ಬಿ' ಜೀವಸತ್ವ ರಾಗಿಯಲ್ಲಿರುವುದು.

**ಆಹಾರ :** ರಾಗಿಯ ಹಿಟ್ಟನಿಂದ ರಾಗಿ ಮುದ್ದೆ ತಯಾರಿಸುತ್ತಾರೆ. ರಾಗಿಯಿಂದ ತಯಾರಿಸುವ ಮಾಲ್ಟ್ ಅನ್ನಾಂಗದ ಕೊರತೆಯಿರುವವರಿಗೆ ಸೂಕ್ತ. ರಾಗಿ ಅಂಬಲಿ ನಿತ್ರಾಣ ಹೊಂದಿದವರಿಗೆ ಚೇತನಪೂರ್ಣ. ರಾಗಿರೊಟ್ಟಿ, ದೋಸೆಗಳೆಲ್ಲಾ ತಿನ್ನಲು ಚೆನ್ನ.

[34 ನೇ ಪುಟ ನೋಡಿ]

# ಯೋಗ ಶಕ್ತಿಯ ಅದ್ಭುತ ಚಿಕಿತ್ಸೆ

—ಪ. ರಾಮಕೃಷ್ಣ ಶಾಸ್ತ್ರಿ

ಫಿಲಿಫೈನ್ಸ್ ದೇಶದ ರಾಜಧಾನಿ ಮನಿಲಾದಿಂದ ೧೬೦ ಮೈಲು ದೂರದಲ್ಲಿ ಬಾಗ್ಯೂಯೋ ಎಂಬ ನಗರವಿದೆ. ಅಲ್ಲಿ ೪೨ ವರ್ಷ ವಯಸ್ಸಿನ ಟೋನೀ ಅಗ್ ಪಾಪೋ ಬ್ಲಾಂಚೆ ಎಂಬ ರೈತನಿದ್ದಾನೆ. ಅವನೊಬ್ಬ ಅತಿಮಾನವ ಚಿಕಿತ್ಸಕನೆಂದೂ ಪವಾಡ ಮಾಡುವವನೆಂದೂ ಆಧ್ಯಾತ್ಮವಾದೀ ವೈದ್ಯನೆಂದೂ ಅವನ ಹೆಸರು ಪ್ರಸಿದ್ಧವಾಗುತ್ತಿದೆ. ಅವನು ಯಾವುದೇ ಮೆಡಿಕಲ್ ಕಾಲೇಜಿನಲ್ಲಿ ಶಿಕ್ಷಣ ಪಡೆದ ವೈದ್ಯನಲ್ಲ. ಶಸ್ತ್ರಚಿಕಿತ್ಸೆ ಮಾಡುವ ಬಗ್ಗೆ ಅವನಿಗೆ ಗೊತ್ತಿಲ್ಲ. ಯಾವ ಉಪಕರಣವನ್ನೂ ಬಳಸದೆ, ರೋಗಿಗೆ ಶಸ್ತ್ರಚಿಕಿತ್ಸೆ ಮಾಡಬೇಕಾದ ಭಾಗದ ಸ್ವಲ್ಪ ಮೇಲಿಂದ ಬೆರಳನ್ನು ಆಡಿಸುತ್ತಾನೆ. ಆಗ ವ್ರಣ ತಂತಾನೇ ತೆರೆದುಕೊಳ್ಳುತ್ತದೆ. ಅನಂತರ ಅದರೊಳಗಿಂದ ಕೀವು, ಕೆಟ್ಟ ರಕ್ತವನ್ನೆಲ್ಲ ಕೈಯಿಂದ ಒರೆಸುತ್ತಾನೆ. ಅದರಿಂದ ಗಾಯ ತಂತಾನೇ ಮುಚ್ಚಿಕೊಳ್ಳುತ್ತದೆ

೧೯೬೪ ರಿಂದ ಅಮೇರಿಕ, ಆಸ್ಟ್ರೇಲಿಯ, ಇಂಗ್ಲೇಂಡ್ ಮತ್ತು ಜರ್ಮನ್‌ಗಳಿಂದ ಅಸಂಖ್ಯಾತ ಜನರು ಬ್ಲಾಂಚೆಯ ಬಳಿ ಆಗಮಿಸಿದ್ದಾರೆ. ಅವನು ನಲವತ್ತುಸಾವಿರಕ್ಕಿಂತ ಹೆಚ್ಚು ರೋಗಿಗಳಿಗೆ ಈ ಚಿಕಿತ್ಸೆ ಮಾಡಿದ್ದಾನೆಂದೂ ಪ್ರತಿಶತ ೯೫ ಮಂದಿ ಅದರಿಂದ ಒಳ್ಳೆಯ ಪ್ರಯೋಜನ ಹೊಂದಿದ್ದಾರೆಂದೂ ಹೇಳಲಾಗುತ್ತಿದೆ. ಚಿಕಿತ್ಸೆಗಾಗಿ ಆತ ಹಣ ತೆಗೆದುಕೊಳ್ಳುವುದಿಲ್ಲ; ದೇವರ ದಯೆಗಾಗಿ ಈ ಕೆಲಸ ಮಾಡುತ್ತಿದ್ದೇನೆ ಎಂದು ಹೇಳುತ್ತಾನೆ.

ಮನಿಲಾದ ಆಸ್ಟ್ರೇಲಿಯನ್ ಮಹಿಳೆಯೊಬ್ಬಳ ಏಳು ವಯಸ್ಸಿನ ಹೆಣ್ಣುಮಗುವಿಗೆ ನೇತ್ರವ್ಯಾಧಿಯಿತ್ತು. ಓದುವಾಗ ಕಣ್ಣಿನಿಂದ ನೀರಿಳಿಯುತ್ತಿತ್ತು. ಪುಸ್ತಕವೂಗಿನ ಹತ್ತಿರ ಹಿಡಿಯಬೇಕಾದ ಅವಸ್ಥೆ ಇತ್ತು. ಬ್ಲಾಂಚೆಯ ಬಗೆಗೆ ಸಾಕಷ್ಟು ಕೇಳಿದ್ದ ಮಹಿಳೆ ಮಗಳನ್ನು ಅವನ ಬಳಿಗೆ ಕರೆದೊಯ್ದಳು. ಬ್ಲಾಂಚೆ ಹುಡುಗಿಯನ್ನು ಮೇಜಿನಮೇಲೆ ಮಲಗಿಸಿ, ಕಣ್ಣಿನ ರೆಪ್ಪೆಗಳನ್ನು ಹಗುರಾಗಿ ನೀವಲಾರಂಭಿಸಿದ. ಆಗ ಅವಳಿಗೆ ಯಾವುದೋ ವಸ್ತು ಹೊರಬರುತ್ತಿರುವಂತೆ ಭಾಸವಾಯಿತು. ಅಷ್ಟರಲ್ಲಿ ಬ್ಲಾಂಚೆಯ ಬೆರಳುಗಳ ಮಧ್ಯೆ ಕಂದುವರ್ಣದ ಹರಳೊಂದು ಕಂಡುಬಂತು. ಸ್ವಲ್ಪ ಹೊತ್ತಿನಲ್ಲಿ ಇನ್ನೊಂದು ಕಣ್ಣಿನಿಂದಲೂ ಆ ಹರಳು ತೆಗೆದ.

ಮುಂದೆ ಈ ಹುಡುಗಿಯ ಕಣ್ಣುಗಳು ಸರಿಯಾದವು. ಲಾಸ್ಏಂಜಲ್ಸಿನ ವೈದ್ಯರೂ ಅದನ್ನು ಒಪ್ಪಿಕೊಂಡರು. ಅವಳ ಕಣ್ಣುಗಳಿಂದ ತೆಗೆದ ಹರಳುಗಳನ್ನು ಆಲ್ಕೋಹಾಲಿನಲ್ಲಿ ಹಾಕಿ ಆ ಮಹಿಳೆ ಜೋಪಾನವಾಗಿ ತನ್ನ ಮನೆಯಲ್ಲಿ ತೆಗೆದಿರಿಸಿದ್ದಾಳೆ.

ಇನ್ನೊಬ್ಬ ಹೆಂಗಸಿಗೆ ಅಪೆಂಡಿಸೈಟಿಸ್ ಬಾಧೆ ಇತ್ತು. ಅಸಾಧ್ಯ ನೋವಿನಿಂದ ಅವಳು ನರಳುತ್ತಿದ್ದಳು. ಬ್ಲಾಂಚೆ ಅವಳ ಹೊಟ್ಟೆಯ ಒಳಭಾಗದಲ್ಲಿ ಬೆರಳನ್ನು ಅಲ್ಲಾಡಿಸಿದ. ಆಗ ಆ ಭಾಗದ ಚರ್ಮ ಸೀಳಾಗಿ ತೆರೆದುಕೊಂಡಿತು. ಅವನು ಒಳಗೆ ಕೈಹಾಕಿ ಬಾತು ಉಬ್ಬಿದ ಅಪೆಂಡಿಕ್ಸನ್ನು ಹೊರಗೆ ತೆಗೆದು ಕೊಳೆತ ಕೀವು ರಕ್ತವನ್ನು ಶುಚಿಮಾಡಿದ. ಅನಂತರ ಬೆರಳಿನಿಂದ ಸವರಿದ. ಸೀಳಿದ ಚರ್ಮ ಸೇರಿಕೊಂಡಿತು. ಚಿಕಿತ್ಸೆ ಮಾಡಿದ ಕಲೆ ಕೂಡ ಉಳಿಯದೆ ಆಕೆ ಗುಣಮುಖಳಾದಳು. ಚಿಕಿತ್ಸೆಯಿಂದ ಅವಳಿಗೆ ಯಾವ ನೋವೂ ಉಂಟಾಗಲಿಲ್ಲ.

ಒಬ್ಬ ಹುಡುಗನಿಗೆ ಕಾಲಿನಲ್ಲಿ ಒಂದು ಭಯಂಕರ ಬಾವು ಎದ್ದಿತು. ಅವನು ಚಿಕಿತ್ಸೆಗಾಗಿ ಬ್ಲಾಂಚೆಯ ಮನೆಗೆ ಹೋಗಿದ್ದ. ಬ್ಲಾಂಚೆಯ ಬೆರಳಿನ ಸೂಚನೆಗೆ ಮಣಿದು ಆ ಬಾವು ಒಡೆದುಕೊಂಡಿತು. ಬಾವಿನೊಳಗೆ ಗೋಲಿಯಾಕಾರದ ಕೆಂಪಗಿನ ಮಾಂಸದ ಗಂಟೊಂದು ಗೋಚರಿಸಿತು. ಬ್ಲಾಂಚೆ ಆ ಗಂಟನ್ನು ಕಿತ್ತು ತೆಗೆದ. ಅನಂತರ ಚರ್ಮವನ್ನು ಸವರಿದ. ಅದು ಮೊದಲು ಹೇಗಿತ್ತೋ ಹಾಗೆಯೇ ಬೆಸೆದುಕೊಂಡಿತು. ಆ ಚಿಕಿತ್ಸೆ ನಡೆಸುವಾಗ ಹುಡುಗನ ಮುಖದಲ್ಲಿ ಕೊಂಚವಾದರೂ ನೋವು ಕಾಣಿಸಲಿಲ್ಲ. ಆತ ಶಸ್ತ್ರವಿಲ್ಲದೆ ಈ ಶಸ್ತ್ರಕ್ರಿಯೆಯನ್ನು ಮಾಡುತ್ತಾನೆ. ಗಾಯವೂ ಚಿಕಿತ್ಸೆ ಮುಗಿದಾಗ ಮಾಯುತ್ತದೆ. ರಕ್ತಸ್ರಾವ ಆಗುವುದಿಲ್ಲ. ಚಿಕಿತ್ಸೆಯಿಂದಾಗಿ ಇದುವರೆಗೂ ಯಾವ ರೋಗಿಗೂ ಪ್ರಾಣಾಪಾಯ ಬಂದ ಘಟನೆಗಳಿಲ್ಲ.

ಒಂದು ದಿನದಲ್ಲಿ ಆತ ನೂರಕ್ಕಿಂತ ಹೆಚ್ಚು ಚಿಕಿತ್ಸೆ ಮಾಡುತ್ತಾನೆ. ಬ್ರಿಟನ್ನಿನ ಆಧ್ಯಾತ್ಮಿಕ ರೋಗನಿವಾರಕ ಸಂಸ್ಥೆಯ ಅಧ್ಯಕ್ಷ ಗಿಲ್ಬರ್ಟ್ ಅಂಡರ್‌ಸನ್ನರು ಬ್ಲಾಂಚೆ ಮಾಡಿದ ೫೦೦ ಆಪರೇಷನ್‌ಗಳನ್ನು ವೀಕ್ಷಿಸಿದ ಬಳಿಕ ಅವನಲ್ಲಿ ಯಾವ ಮೋಸಗಾರಿಕೆಯೂ ಇಲ್ಲವೆಂದು ಒಪ್ಪಿಕೊಂಡಿದ್ದಾರೆ. ಮೂತ್ರಕೋಶದ ಕಲ್ಲುಗಳು ಕ್ಯಾನ್ಸರು, ನಾನಾಬಗೆಯ ವ್ರಣಗಳು, ಕರುಳಿನ ರೋಗಗಳು ಎಲ್ಲಕ್ಕೂ ಬ್ಲಾಂಚೆ ಈ ಚಿಕಿತ್ಸೆಯಿಂದ ಶಾಶ್ವತ ಪರಿಹಾರ ನೀಡಿದ್ದಾನೆ.

ಅಮೇರಿಕದ ಮೆಡಿಕಲ್ ಅಸೋಸಿಯೇಷನ್ ಬ್ಲಾಂಚೆ ಮಾಡುವುದೆಲ್ಲಾ ಠಕ್ಕು ಠೌಳಿಯೆಂದು ಆರೋಪಿಸಿತ್ತು. ಆದರೆ ಅನೆಸ್ಥಿಟಿಕ್ಸ್ ಇಲ್ಲದೆ, ಎಂಟಿಸೆಪ್ಟಿಕ್ ಉಪಯೋಗಿಸದೆ, ಶಸ್ತ್ರ ಮುಟ್ಟದೆ ಅವನು ಆಪರೇಷನ್ ಮಾಡುವುದನ್ನೂ ಹೊಲಿಗೆ ಹಾಕದೆ ಗಾಯ ಮಾಯಿಸುವುದನ್ನು ಕಂಡ ಅಸಂಖ್ಯಾತ ಮಂದಿ ಈ ಆರೋಪವನ್ನು ವಿರೋಧಿಸಿದ್ದಾರೆ. ಸ್ವತಃ ಗಿಲ್ಬರ್ಟ್ ಅಂಡರ್‌ಸನ್ನರ ಅನುಭವ ಪ್ರಕಾರ, "ಅವನು

ಪೆಟ್ಟಿಗೆ ಮುಚ್ಚಳ ತೆರೆದಂತೆ ದೇಹವನ್ನು ತೆರೆಯಬಲ್ಲ. ನನಗೆ ಬೆನ್ನುಹುರಿಯಲ್ಲಿ ಅಸಾಧ್ಯ ನೋವು ಇತ್ತು. ಅದು ಆಗಾಗ ಬಾಧಿಸುತ್ತಿತ್ತು. ಬ್ಲಾಂಚೆ ನನ್ನ ಕಾಲಿನಿಂದಾರಂಭಿಸಿ ಬೆನ್ನುಹುರಿಯವರೆಗೆ ಚರ್ಮವನ್ನು ತೆರೆದ, ಆತ ನನ್ನ ಕೈಯಲ್ಲಿ ಕೊಟ್ಟಿದ್ದ ಕನ್ನಡಿಯಲ್ಲಿ ಇದೆಲ್ಲವನ್ನೂ ನಾನು ನೋಡುತ್ತಲೇ ಇದ್ದೆ. ಬ್ಲಾಂಚೆ ಬೆನ್ನುಹುರಿಯ ದೋಷವನ್ನು ಸರಿಪಡಿಸಿದ. ಗುರುತು ಕೂಡ ಉಳಿಯದಂತೆ ಗಾಯವನ್ನು ಕೂಡಿಸಿದ" ಎಂದು ವರದಿ ಮಾಡಿದ್ದಾರೆ. ಬ್ಲಾಂಚೆಯ ಶಸ್ತ್ರಕ್ರಿಯೆಯ ವಿಧಾನದ ಚಲನಚಿತ್ರವನ್ನು ಅವರು ತಯಾರಿಸಿ ಬ್ರಿಟನ್ನಿನ ಎಲ್ಲೆಡೆಯೂ ಈಗಾಗಲೇ ಪ್ರದರ್ಶನ ಮಾಡಿದ್ದಾರೆ.

ಬ್ಲಾಂಚೆ ಮಾಡುವ ಅದ್ಭುತ ಶಸ್ತ್ರಕ್ರಿಯೆಯ ಬಗೆಗೆ ಈಗಲೂ ಸುದ್ದಿಗಳು ಕೇಳಿಬರುತ್ತಲೇ ಇವೆ. ರೋಗಿಗಳು ತಮ್ಮ ಹೆಸರು ಮತ್ತು ರೋಗದ ವಿವರಗಳನ್ನು ಚೀಟಿಯಲ್ಲಿ ಬರೆದು ಕಳುಹಿಸಿಕೊಡುತ್ತಾರೆ. ಅನಂತರ ಬ್ಲಾಂಚೆ ಅವರನ್ನು ಸರದಿ ಪ್ರಕಾರ ಒಳಗೆ ಕರೆದು ಸರಸರನೆ ಚಿಕಿತ್ಸೆ ಮಾಡುತ್ತಾನೆ. ಯೋಗಶಕ್ತಿಯಿಂದ ಅವನಿಗೆ ಈ ಪವಾಡಸದೃಶ ಶಕ್ತಿ ಲಭ್ಯವಾಗಿದೆಯೆಂಬುದು ಹಲವರ ಅಂಬೋಣ.

---

[31ನೇ ಪುಟದಿಂದ]

ಸಿಹಿಮೂತ್ರ ರೋಗಗಳಿಗೆ ರಾಗಿಮುದ್ದೆಯನ್ನು ಶಿಫಾರಸು ಮಾಡಲಾಗಿದೆ. ರಾಗಿ ಸೇವನೆಯಿಂದ ರಕ್ತದಲ್ಲಿರುವ ಕೊಲೆಸ್ಟರಾಲ್ ಅಂಶ ಕಡಿಮೆಯಾಗುತ್ತದೆಂಬ ಬಗ್ಗೆ ಸಂಶೋಧನೆಗಳು ನಡೆದಿವೆ.

ಕೃಷಿ ಕಾರ್ಮಿಕರು, ಕಾರ್ಖಾನೆಗಳ ಕಾರ್ಮಿಕರು, ಗಿರಣಿ ನೌಕರರು, ಗಾಡಿ ಎಳೆಯುವವರು, ಕಲ್ಲುಕುಟಿಗರು ಹೀಗೆ ವಿವಿಧ ವರ್ಗದ ಶ್ರಮಜೀವಿಗಳಿಗೆ ರಾಗಿ ಆಹಾರ. ಊಟ ಮಾಡಿದ ಮೇಲೆ ಬಹುಕಾಲ ಹಸಿವು ಕಾಣದೆ ಇರುವುದರಿಂದ ರಾಗಿ ಶ್ರಮಜೀವಿಗಳಿಗೆ ಪ್ರಿಯವಾದ ಆಹಾರ.

ಹಾಗೆಂದು ಗುಮಾಸ್ತರು ಮುಂತಾದ ದೈಹಿಕ ಶ್ರಮ ಇಲ್ಲದವರು ರಾಗಿಯನ್ನು ಕಡೆಗಣಿಸಬಾರದು. ಎಲ್ಲ ವರ್ಗದವರಿಗೂ ಇದು ಉತ್ತಮ ಆಹಾರವಾಗಬಲ್ಲದು.

**ತಳಿಗಳು :** ಹಂಸ, ಶಕ್ತಿ, ಪೂರ್ಣ, ಕಾವೇರಿ, ಅರುಣ ಇತ್ಯಾದಿ ಹಲವು ರಾಗಿ ತಳಿಗಳಿವೆ. ಇಂಡಾಫ್ ಎಂಬುದು ಕೃಷಿ ವಿಶ್ವವಿದ್ಯಾನಿಲಯದವರ ಸಂಶೋಧನೆಯ ಫಲವಾಗಿ ಬಂದ ತಳಿ.

ಖುಷ್ಕಿ ಭೂಮಿಗಳಲ್ಲಿ ಬೆಳೆಯಬಹುದಾದ ಪ್ರಮುಖ ಬೆಳೆಗಳಲ್ಲಿ ರಾಗಿ ಬೆಳೆಯ ಸ್ಥಾನ ಮಹತ್ವವಾದುದು. ಇದೀಗ ರಾಗಿ ಬೆಲೆ ದುಬಾರಿಯಾಗಿದ್ದು ಬಡಜನರು ಮತ್ತು ಮಧ್ಯಮ ವರ್ಗದ ಜನರು ಕಂಗಾಲಾಗಿದ್ದಾರೆ. ರಾಗಿ ಬೆಲೆಯನ್ನು ಇಳಿಸಿ, ಪೋಷಕಾಂಶವುಳ್ಳ ಇದನ್ನು ಶ್ರೀಮಂತ ವರ್ಗದವರೂ ಆಹಾರದಲ್ಲಿ ಬಳಸುವಂತೆ ಮಾಡುವುದು ಇದೀಗ ಅಗತ್ಯವೆನಿಸುತ್ತದೆ.

# ಶಿಶು ಭೇದಿ

(ನಿರೋಧ ಮತ್ತು ಚಿಕಿತ್ಸೆ)

—ಡಾ|| ಹೆಚ್.ಡಿ. ಚಂದ್ರಪ್ಪಗೌಡ

ಇತ್ತೀಚಿನ ವರ್ಷಗಳಲ್ಲಿ ಶಿಶುಗಳಿಗೆ ಅತಿ ಭೇದಿಯಾಗುವುದು ಸರ್ವೇಸಾ ...ನ್ಯವಾಗುತ್ತಿದೆ. ನಮ್ಮ ದೇಶದಲ್ಲಿ ಐದು ವರ್ಷದೊಳಗಿನ ಮಕ್ಕಳ ಅಸ್ವಸ್ಥತೆ ...ತ್ತು ಸಾವಿಗೆ, ಭೇಧಿ ಈಗ ಒಂದು ಮುಖ್ಯ ಕಾರಣ. ಮಗುವಿಗೆ ದಿನದಲ್ಲಿ ...5 ಸಾರಿ ಜಲಮಿಶ್ರಿತ ಮಲವಿಸರ್ಜನೆ ಯಾದಲ್ಲಿ ಅದಕ್ಕೆ ಭೇಧಿಯ ಸೋಂಕು ...ಲಿದೆ ಎಂದು ಪರಿಗಣಿಸಬಹುದು.

**...ದಿ ಹರಡುವ ಬಗೆ**

ಕಲುಷಿತವಾದ ನೀರು ಮತ್ತು ಆಹಾರ ಪದಾರ್ಥಗಳ ಮೂಲಕ ಭೇದಿಯ ...ೋಂಕು ಸಾಮಾನ್ಯವಾಗಿ ಜನ ಸಮುದಾಯದಲ್ಲಿ ಹರಡುತ್ತದೆ. ಕುಡಿಯುವ ...ು ಮತ್ತು ಸೇವಿಸುವ ಆಹಾರ ಪದಾರ್ಥಗಳನ್ನು ಶುಚಿತ್ವದ ನಿಯಮಗಳ ಪ್ರಕಾರ ...ುವ ಏರ್ಪಾಡುಗಳಿದ್ದರೆ ಭೇದಿಯ ಸೋಂಕು ವ್ಯಾಪಕವಾಗಿ ಹರಡದಂತೆ ತಡೆ ...ು ಸಾಧ್ಯ. ನೀರು ಕಲುಷಿತವಾಗುವ ಅವಕಾಶಗಳಿದ್ದಲ್ಲಿ, ಅದನ್ನು ಸರಿಯಾಗಿ ...ುಸಿ ಕುಡಿಯುವುದು ಕ್ಷೇಮ.

**...ದಿ ಅಪಾಯಕಾರಿಯಾಗಬಲ್ಲುದು**

... ವರ್ಷದೊಳಗಿನ ಮಕ್ಕಳಲ್ಲಿ ಭೇದಿ ಅಪಾಯಕಾರಿಯಾಗುವ ಸಂಭವ ಹೆಚ್ಚು ...ರಲೇ, ಕ್ಷೀಣಿಸಿದ್ದ ಮಕ್ಕಳಿಗೆ, ಜಲಮಿಶ್ರಿತ ಮಲವಿಸರ್ಜನೆಯ ಜೊತೆಗೆ ವಾಂತಿ ...ತ್ತು ಜ್ವರ ಒಂದುಗೂಡಿದ್ದರಂತೂ ಅಪಾಯ ಇನ್ನೂ ಜಾಸ್ತಿ.

ನೀರು ಮತ್ತು ಲವಣಾಂಶಗಳು ಪ್ರಾಣಿ ವರ್ಗಗಳ ಜೀವಕ್ಕೆ ಅತ್ಯಂತ ಉಪ ...ಕ್ತ ಸಾಮಗ್ರಿಗಳು. ಪದೇ ಪದೇ ಜಲಮಿಶ್ರಿತ ಮಲವಿಸರ್ಜನೆಯಾಗುವವರಲ್ಲಿ ...ಡು ಅಂಶಗಳು ಹೆಚ್ಚಿನ ಪ್ರಮಾಣದಲ್ಲಿ ಶರೀರದಿಂದ ಹೊರ ಬೀಳುತ್ತವೆ. ...ರಿಣಾಮದಿಂದ ಮಗುವು ಒಣಗಿದಂತಾಗುತ್ತದೆ. ಕಣ್ಣುಗಳು ಗುಳಿಬಿದ್ದು, ...ು ಗುಳಿ (FRONTANLLAE) ಕುಗ್ಗುತ್ತದೆ. ಮೂತ್ರ ವಿಸರ್ಜನೆ ಕಡಿಮೆ ...ಗಿ ಪೂರ್ತಿ ನಿಂತು ಹೋಗಲೂಬಹುದು. ಮುಂದೆ ಮಗುವಿಗೆ ಮಂಕು ಕವಿ ...ಗಿ, ಪ್ರಜ್ಞಾಹೀನ ಸ್ಥಿತಿಗೂ ತಲುಪಬಹುದು. ಉಸಿರಾಟವೂ ಬಿರುಸಾಗು

ತ್ತದೆ. ಸಾಮಾನ್ಯವಾಗಿ ಅಂತಹ ಪರಿಸ್ಥಿತಿಗೆ ಮಗುವು ತಲುಪುವವರೆಗೂ ತಾಂ
ದಿರು ಹೆಚ್ಚಿನ ಗಮನ ಕೊಡದಿರುವುದು ದುರದೃಷ್ಟಕರ. ಕಾಯಿಲೆಯು ಇ
ಉಲ್ಬಣ ಸ್ಥಿತಿಗೆ ಬಂದಮಕ್ಕಳನ್ನು ಬದುಕಿಸುವುದು ಕಷ್ಟ. ಯಾವ ಮಗುವಿ
ದರೂ ದಿನವಲ್ಲಿ 4–5 ಸಾರಿ ಭೇದಿಯಾದಲ್ಲಿ ಈ ಕೆಳಗೆ ನಮೂದಿಸಿದ ಪ್ರಮಾಣ
ಲವಣಾಂಶಗಳಿರುವ ನೀರಿನ ಮಿಶ್ರಣವನ್ನು ಕುಡಿಸಲು ಪ್ರಾರಂಬಿಸಿದರೆ, ಮಗು
ಶರೀರ ನಿರ್ಜಲವಾಗುವುದನ್ನು ತಡೆಗಟ್ಟಿ, ಪರಿಸ್ಥಿತಿ ಹದಗೆಡದಂತೆ ತಡೆಯಲು ಸಾ
ಸುಲಭ ತರದ ಈ ಚಿಕಿತ್ಸೆಯಿಂದ ಇತ್ತೀಚಿನ ವರ್ಷಗಳಲ್ಲಿ ಪ್ರಪಂಚದಾದ್ಯ
ಲಕ್ಷಾಂತರ ಮಕ್ಕಳನ್ನು ಈ ಪಿಡುಗಿನಿಂದ ರಕ್ಷಿಸಲು ಸಾಧ್ಯವಾಗಿದೆ.

**ಬಾಯಿ ಮೂಲಕ ನೀಡುವ ಮರುನೀರ್ಗೂಡಿಕೆ ದ್ರಾವಣ**

( ORAL REHYDRATION SOLUTION. O. R. S. )

| | | |
|---|---|---|
| 1. ಪುಡಿ ಮಾಡಿದ ಅಡಿಗೆ ಉಪ್ಪು (Powdered common salt) | .... | ಒಂದು ಟೀ ಚಮಚ (ಸಮುಮಟ್ಟಕ್ಕೆ) |
| 2. ಅಡಿಗೆ ಸೋಡ (Sodium Bicarbonate) | .... | ಒಂದು ಟೀ ಚಮಚ (ಸಮುಮಟ್ಟಕ್ಕೆ) |
| 3. ಗ್ಲೂಕೋಸ್ (Glucose) | .... | ನಾಲ್ಕು ಟೀ ಚಮಚ (ರಾಶಿ ಹಾಕಿದಂತೆ) |
| 5. ಸಕ್ಕರೆ (Sugar) | .... | ಎಂಟು ಟೀ ಚಮಚ (ರಾಶಿ ಹಾಕಿದಂತೆ) |
| 5. ನೀರು. (ಕಾಯಿಸಿ,ಆರಿಸಿದ್ದು) | .... | ಒಂದು ಲೀಟರು |

ಮೇಲಿನ ಸಾಮಗ್ರಿಗಳನ್ನೆಲ್ಲಾ ಕರಗಿಸಿ ಶುಚಿಯಾದ ಗಾಜಿನ ಸೀಸೆ ಅಥ
ಪಾತ್ರೆಯಲ್ಲಿ ಶೇಖರಿಸಿಕೊಳ್ಳಬೇಕು ಅದನ್ನು ಮತ್ತೆ ಕಾಯಿಸಬಾರದು: ಅ
ಹನ್ನೆರಡು ಗಂಟೆಗಿಂತ ಹೆಚ್ಚು ಕಾಲ ಶೇಖರಿಸಿಡಲೂ ಬಾರದು.

ಮೊದಲೇ ನಿಗದಿತ ಪ್ರಮಾಣದಲ್ಲಿ ತಯಾರಿಸಿದ ಈ ಲವಣಾಂಶಗಳ ಪೊ
ಣಗಳು ಆಸ್ಪತ್ರೆ, ಆರೋಗ್ಯಕೇಂದ್ರ ಮತ್ತು ಔಷದಿಗಳ ಅಂಗಡಿಗಳಲ್ಲೂ ದೊರೆಯುತ್ತ
ಆದರೂ ಪ್ರತಿ ಮನೆಯಲ್ಲೂ ಸಾಮನ್ಯವಾಗಿ ದೊರೆಯುವ ಸಾಮಗ್ರಿಗಳಿಂದ ಸುಲಭ
ರಲ್ಲಿ ತಯಾರಿಸಿಕೊಳ್ಳಬಹುದು.

### ಚಿಕಿತ್ಸಾ ವಿಧಾನ

ಪ್ರತಿ 5–10 ನಿಮಿಷಗಳ ಅಂತರದಲ್ಲಿ ಅತ್ಯಂತ ಕಡಿಮೆ ಪ್ರಮಾಣದಿಂದ ಈ ಮಿಶ್ರಣವನ್ನು ಕುಡಿಸುವುದನ್ನು ಶುರುಮಾಡಿ, ನಂತರ ಪ್ರತಿಸಾರಿ ಮಲವಿಸರ್ಜನೆ ಯಾದಗಲೆಲ್ಲಾ ಒಂದೊಂದು- ಲೋಟದಷ್ಟನ್ನು ಕುಡಿಸಬಹುದು. ಭೇದಿ ಸಂಪೂರ್ಣ ವಾಗಿ ನಿಲ್ಲುವವರೆಗೂ ಹಾಗೆ ಕೊಡುತ್ತಿರಬೇಕು. ಈ ರೀತಿ ಮಾಡುವುದರಿಂದ ಸ್ವಲ್ಪ ಸಮಯದಲ್ಲೇ ಮಗುವಿನ ಸ್ಥಿತಿ ಉತ್ತಮಗೊಂಡು ಉಲ್ಲಾಸಭರಿತವಾಗುವುದು ಕಂಡು ಬರುತ್ತದೆ. ಲವಲವಿಕೆಯಿಂದ ಎಂದಿನಂತೆ ಆಹಾರ ಸೇವನೆಗೆ ಹಾತೊರೆಯುತ್ತದೆ.

ಈ ಚಿಕಿತ್ಸೆಯಿಂದ 24 ಗಂಟೆಗಳಲ್ಲಿ ಮಗುವಿನ ಸಾಮಾನ್ಯ ಪರಿಸ್ಥಿತಿ ಉತ್ತ ಮಗೊಳ್ಳದಿದ್ದಲ್ಲಿ, ಅದನ್ನು ತಕ್ಷಣ ಹತ್ತಿರದ ಆಸ್ಪತ್ರೆಗೆ ಸೇರಿಸಬೇಕು. ಆಸ್ಪತ್ರೆಯಲ್ಲಿ ಚಿಕಿತ್ಸೆ ಶುರುವಾಗುವವರೆಗೂ ಈ ಲವಣ ಮಿಶ್ರಣವನ್ನು ಕೊಡುತ್ತಿರಬೇಕು.

### ಆಹಾರ

ಲವಣಾಂಶಗಳ ದ್ರಾವಣವನ್ನು ನೀಡುತ್ತಿರುವ ಮಗುವಿಗೆ ಎಂದಿನ ಸಾಮನ್ಯ ಆಹಾರವನ್ನು ಕೊಡುವುದಕ್ಕೆ ಯಾವ ಅಭ್ಯಂತರವೂ ಇರುವುದಿಲ್ಲ. ಭೇದಿಯಾಗುತ್ತಿ ರುವ ಮಗುವಿಗೆ ತಾಯಿಯ ಎದೆಹಾಲಿಗಿಂತ ಶ್ರೇಷ್ಟ ಹಾಗೂ ಸುರಕ್ಷಿತವಾದ ಆಹಾರ ಬೇರೊಂದಿಲ್ಲ. ಎಳನೀರು, ಬೇಳೆ ಸಾರು, ರಸಂ ಮುಂತಾದ ನೀರು ಪದಾರ್ಥಗಳನ್ನು ಕೊಡಬಹುದು. ಆದರೆ ತಾಯಂದಿರು ಮಕ್ಕಳ ಪೋಷಣೆ ಮತ್ತು ಆಹಾರ ನೀಡುವ ಸಂದರ್ಭಗಳಲ್ಲಿ ಆರೋಗ್ಯ ಮತ್ತುಶುಚಿತ್ವದ ನಿಯಮಗಳನ್ನು ತಪ್ಪದೇ ಪಾಲಿಸಬೇಕು.

**ಈ ಕೆಳಗಿನ ಸಂದರ್ಭಗಳಲ್ಲಿ ಅತಿಯಾದ ಭೇದಿ, ಮಕ್ಕಳಿಗೆ ಅತ್ಯಂತ ಅಪಾ ಯಕಾರಿಯಾಗಬಹುದು:**

1. ಒಂದು ವರ್ಷದೊಳಗಿನ ಶಿಶು.
2. ಮೊದಲೇ ಕ್ಷೀಣಿಸಿದ್ದ ಮಗು.
3. ಭೇದಿಯ ಜೊತೆ , ವಾಂತಿ ಮತ್ತು ಜ್ವರ.
4. ಲೋಳೆ ಮತ್ತು ರಕ್ತಮಿಶ್ರಿತ ಭೇದಿ.
5. ಮೂತ್ರವಿಸರ್ಜನೆ ನಿಲ್ಲುವುದು.
6. ಮಂಕು , ಪ್ರಜ್ಞಾಹೀನತೆ,
7. ಹಣೆಯ ಮೇಲ್ಭಾಗದ ಗುಳಿ ಕುಗ್ಗುವುದು.

ಈ ಎಲ್ಲಾ ಪರಿಣಾಮಗಳನ್ನೂ 3-4 ಸಾರಿ ನೀರಾಗಿ ಭೇದಿಯಾದ ತಕ್ಷಣ ಲವಣಾಂಶಗಳ ಮಿಶ್ರಣವನ್ನು ನೀಡುವುದಕ್ಕೆ ಆರಂಭಿಸುವುದರಿಂದ ತಡೆಗಟ್ಟಬಹುದು.

## ಭೇದಿಯ ಸೋಂಕನ್ನು ತಡೆಗಟ್ಟುವಿಕೆ

ರೋಗದ ಚಿಕಿತ್ಸೆಗಿಂತ ಅದು ಬಾರದಂತೆ ತಡೆಗಟ್ಟುವುದು ಶ್ರೇಷ್ಠವೆಂಬ ನೀತಿ ಭೇದಿಯ ವಿಷಯದಲ್ಲಿ ಬಹಳ ಸಮಂಜಸ. ಮಲಮೂತ್ರಗಳ ತೃಪ್ತಿಕರ ವಿಕರಣೆ ಮತ್ತು ಕುಡಿಯುವ ನೀರು ಕಲುಷಿತವಾಗದಂತೆ ಜಾಗ್ರತೆವಹಿಸಲು ಸಾಧ್ಯವಾದ ಪ್ರದೇಶಗಳಲ್ಲಿ ಈ ಸೋಂಕಿನ ಹಾವಳಿ ಅತ್ಯಂತ ಕಡಿಮೆ. ಭೇದಿಯ ಸೋಂಕು ಹರಡದಿರಲು ಈ ಕೆಳಗಿನ ನಿಯಮಗಳ ಪಾಲನೆ ಅತ್ಯಂತ ಸಹಕಾರಿಯಾಗಬಲ್ಲವು.

1) ಕುಡಿಯುವ ನೀರಿನ ಮೂಲಸ್ಥಾನಗಳು ಕಲುಷಿತವಾಗದಂತೆ ಎಚ್ಚರವಹಿಸಬೇಕು. ಅಡಿಗೆ ಮತ್ತು ಕುಡಿಯುವುದಕ್ಕೆ ಶುದ್ಧವಾದ ನೀರನ್ನೇ ಬಳಸಬೇಕು. ನೀರನ್ನು ಯಾವಾಗಲೂ ಕಾಯಿಸಿ ಕುಡಿಯುವುದು ಒಳ್ಳೆಯದು.

2) ಕುಡಿಯುವ ನೀರನ್ನು ಶುಚಿಯಾದ ಪಾತ್ರೆಗಳಲ್ಲಿ ಶೇಖರಿಸಿ ಮುಚ್ಚಿಟ್ಟು ಕೊಳ್ಳಬೇಕು.

3) ಮಲವಿಸರ್ಜನೆಯನ್ನು ಕಕ್ಕಸುಗಳಲ್ಲೇ ಮಾಡಬೇಕು. ಇದರಿಂದ ವಿಸರ್ಜಿಸಿದ ಮಲದ ಮೇಲೆ ನೊಣಗಳು ಕುಳಿತು ಅವುಗಳಿಂದ ಸೋಂಕು ಹರಡುವುದು ತಪ್ಪುತ್ತದೆ. ಕಕ್ಕಸುಗಳಿಲ್ಲದ ಕಡೆಗಳಲ್ಲಿ ಮನೆಯಿಂದ ದೂರದಲ್ಲಿ ಗುಂಡಿಗಳನ್ನು ತೆಗೆದು, ಮಲವಿಸರ್ಜನೆಯಾದಮೇಲೆ ಅದನ್ನು ಮಣ್ಣಿನಿಂದ ಮುಚ್ಚಬೇಕು.

4) ಮಲವಿಸರ್ಜನೆಯಾದಮೇಲೆ ಪ್ರತಿಸಾರಿ ಕೈಗಳನ್ನು ಚೆನ್ನಾಗಿ ಸಾಬೂನಿನಿಂದ ತೊಳೆದು ಶುಚಿ ಮಾಡಿಕೊಳ್ಳಬೇಕು.

2) ಕೈ ಉಗುರುಗಳನ್ನು ಸರಿಯಾಗಿ ತೆಗೆದು ಶುಚಿಯಾಗಿಟ್ಟುಕೊಳ್ಳಬೇಕು

6) ಹೊಸದಾಗಿ ತಯಾರಿಸಿ ಬಿಸಿಬಿಸಿಯಾಗಿರುವ ಆಹಾರ ಪದಾರ್ಥಗಳನ್ನು ಸೇವಿಸಬೇಕು. ತಣ್ಣನೆ ಆಹಾರವನ್ನು ಬಿಸಿಮಾಡಿ ಸೇವಿಸುವುದು ಒಳ್ಳೆಯದು.

7) ಪರಿಸರವನ್ನು ಸ್ವಚ್ಛವಾಗಿಟ್ಟುಕೊಂಡು ನೊಣಗಳು ಉತ್ಪತ್ತಿಯಾಗದಂತೆ ಎಚ್ಚರಿಕೆ ವಹಿಸಬೇಕು.

[ ಆಧಾರ :– Central Health Education
Buraue New Delhi
CENTRE CALLING
Vol. XVI No. 6 June, 1981 ] 

(26ನೇ ಪುಟದಿಂದ)
ದಲ್ಲಿ ಬಂಗಾರದ ಅಕ್ಷರಗಳನ್ನು ಬರೆದಿಡುವಲ್ಲಿ ಮುಂದಾದವರ ಮೊದಲಸಾಲಿನಲ್ಲಿ ಬಹುವ ಮಹಾವ್ಯಕ್ತಿತ್ವ ಅವರದು. ಅವರ ಈ ನಿಟ್ಟಿನ ಕಾರ್ಯಕೌಶಲವನ್ನು 1929ರಲ್ಲಿ ಜರುಗಿದ ಕವಿಸಮ್ಮೇಲನದ ಸ್ವಾಗತಾಧ್ಯಕ್ಷರಾದಾಗ 1939ರಲ್ಲಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಸಮಿತಿಯ ಸದಸ್ಯರಾದಾಗ, 1940ರಲ್ಲಿ ಅದೇ ಸಂಘದ ಕಾರ್ಯದರ್ಶಿಗಳಾದಾಗ, 1948ರಲ್ಲಿ 4ನೆಯ ಕನ್ನಡ ಸಣ್ಣಕಥೆಗಳ ಸಮ್ಮೇಳನದ ಸ್ವಾಗತಾಧ್ಯಕ್ಷರಾದಾಗ, ಪ್ರಮುಖವಾಗಿ ಕಾಣಬಹುದಾಗಿದೆ.

ಯಶಸ್ವಿ ಸಂಘಟನಾಶೀಲರಾದ ಆನಂದಕಂದರ–ಸತತಾಭ್ಯಾಸ, ವಿಶಾಲವಾದ ಅನುಭವ, ಪ್ರತಿಭಾ, ಸಹೃದಯಲೋಕದ ಪರಿಸರದಲ್ಲಿ ಅರುಣೋದಯ, ಉತ್ಸಾಹ ಗಾಥಾ, ಒಡನಾಡಿ, ಕಾರಹುಣ್ಣಿಮೆ, ಗಾಂಧೀಗೀತ ಸಪ್ತಕ, ನಲ್ವಾಡುಗಳು, ಭಾವಗೀತ, ಮುದ್ದನಮಾತು, ರಮೆಉಮೆಯರ ಸಂವಾದ, ರಾಷ್ಟ್ರೀಯ ಪದ್ಯಮಾಲೆ, ರಾಷ್ಟ್ರೀಯ ಪದ್ಯಾವಲಿ, ವಿರಹಿಣಿ, ಸಾಮಾಜಿಕನ ಸಂವಚನಗಳು ಮೊದಲಾದ 13 ಕವನ ಸಂಕಲನಗಳನ್ನೂ, ಕಳ್ಳರಗುರು, ಜನಪದ ಜೀವನ, ದಶಮಂಜರಿ, ನಮ್ಮ ಬದುಕು, ಬಡತನದ ಬಾಳು, ಮಾತನಾಡುವ ಕಲ್ಲು, ಸಂಸಾರ ಚಿತ್ರ ಮೊದಲಾದ ಏಳು ಕಥಾಸಂಕಲನಗಳನ್ನೂ ಅಶಾಂತಿಪರ್ವ, ಮಗಳ ಮದುವೆ, ಮಲ್ಲಿಕಾರ್ಜುನ, ರಾಜಯೋಗಿ, ರಾಜಶೇಖರ, ಸುದರ್ಶನ ಮೊದಲಾದ ಆರು ಕಾದಂಬರಿಗಳನ್ನು ಪಂಚಗಂಗಾ, ಬೆಂದ ಹೃದಯ, ಬೆಳವಡಿ ಮಲ್ಲಮ್ಮ, ಮುಂಡರಗಿ ಗಂಡುಗಲಿ ಮೊದಲಾದ ನಾಲ್ಕು ನಾಟಕಗಳನ್ನೂ ಬರೆದು ಕನ್ನಡ ಸಾಹಿತ್ಯಶ್ರೀಯ ಸೊಗಸನ್ನು ಹೆಚ್ಚಿಸಿದ್ದಾರೆ.

ಸ್ವಭಾವತಃ ಸಂಶೋಧನಾಶೀಲರಾದ ಶ್ರೀ ಕೃಷ್ಣಶರ್ಮರಲ್ಲಿ ಇತಿಹಾಸ ಪ್ರಜ್ಞೆಯಿರುವುದು ಸಹಜ. ಅದನ್ನು ಅವರ ಕೆಲವು ಕತೆ, ಕಾದಂಬರಿ, ಕವಿತೆಗಳಲ್ಲಿ ಗುರುತಿಸಬಹುದಾಗಿದೆ. ಅಲ್ಲದೆ ಅವರ "ಕನ್ನಡರಾಜ್ಯ ರಮಾರಮಣ" ಎಂಬುದು ಕೇವಲ ಚರಿತ್ರೆಗೆ ಮೀಸಲಾದ ಕೃತಿ. ಕರ್ನಾಟಕ ಜನಜೀವನ, ನಮ್ಮ ಸಂಸ್ಕೃತಿಯ ಪರಂಪರೆ, ಸಾಹಿತ್ಯವು ಸಾಗಿರುವ ದಾರಿ, ಸಾಹಿತ್ಯ ವಿಹಾರ ಮೊದಲಾದ ನಾಲ್ಕು ಗ್ರಂಥಗಳು ಸಂಸ್ಕೃತಿ–ಸಂಶೋಧನೆ ವಿಮರ್ಶೆಗೆ ಮೀಸಲಾದುವು. ಇವುಗಳ ಅಂತರಂಗದಲ್ಲಿ ಇತಿಹಾಸದ ಘಟನೆಗಳ ಪ್ರಾಮಾಣಿಕ ಪ್ರಭಾವವಿರುವುದರ ಮಿಂಚನ್ನು ಅನೇಕ ಕಡೆ ಕಂಡುಹಿಡಿಯಬಹುದು.

ಎಳೆಯ ವಯಸ್ಸಿನಿಂದಲೇ ಸಂಪಾದಕರಾಗಿ ಖ್ಯಾತಿಗಳಿಸಿದ ಕೃಷ್ಣಶರ್ಮರು ಅನೇಕ ಸಂಪಾದಿತ ಕೃತಿಗಳನ್ನೂ ಅವುಗಳಿಗೆ ಉಪೋದ್ಘಾತಗಳನ್ನೂ ನೀಡಿ ಅಳಿದು

ಹೋಗುತ್ತಿದ್ದ ಸಾಹಿತ್ಯದ ತವನಿಧಿಯನ್ನು ಸಂರಕ್ಷಿಸಿಟ್ಟಿದ್ದಾರೆ. ವಿಶೇಷತಃ ದಾಸ ಸಾಹಿತ್ಯದ ಕ್ಷೇತ್ರಕ್ಕೆ ಇವರ ಸಂಪಾದನಾ ಕಾರ್ಯವು ಕನ್ನಡಮ್ಮನಿಗೆ ಗೌರವ ಸಂಪಾದನೆಯೇ ಹೌದು. ಅಕ್ರೂರ ಚರಿತ್ರೆ, ಕನಕದಾಸರ ಭಕ್ತಿಗೀತೆಗಳು, ಪ್ರಸನ್ನ ವೆಂಕಟದಾಸರ ಭಾಗವತ, ಹರಿದಾಸ ಭಕ್ತಿಸಾಧನೆ, ಮೃಚ್ಛಕಟಿಕ ಮೊದಲಾದುವು ಪ್ರತ್ಯೇಕ ಪ್ರತ್ಯೇಕವಾಗಿ ಉಪಕಾರಿಯಾಗಿದ್ದರೆ ಪೂಜಾತತ್ತ್ವ, ಆರ್ತಭಾವ, ಮಹಾತ್ಮಜ್ಞಾನ, ಕೃಷ್ಣಲೀಲಾ, ಲೋಕನೀತಿ ಮತ್ತು ಸಂಕೀರ್ಣ ಸಂಗ್ರಹಗಳು ಪುರಂದರದಾಸರ ಸಾಹಿತ್ಯಾಭ್ಯಾಸಿಗಳಿಗೆ ಸಮಗ್ರ ದೃಷ್ಟಿಯನ್ನೂ ನೀಡುವ ಸಂಶೋಧನಾ–ಸಂಪಾದನಾ ಕ್ಷೇತ್ರದಲ್ಲಿಯೇ ಹೆಸರುಪಡೆದಿರುವ ಕೃತಿಗಳು. ಅದರಂತೆ ಜಾನಪದ ಸಾಹಿತ್ಯ ಕ್ಷೇತ್ರದಲ್ಲಿಯೂ ಬೆಟಗೇರಿಯವರ ಹೆಸರು ಚಿರಸ್ಥಾಯಿ. ಅವರ ಕನ್ನಡ ಜಾನಪದ ಸಾಹಿತ್ಯ, ಬೀಸುಕಲ್ಲಿನ ಹಾಡುಗಳು ಈ ನಿಟ್ಟಿನ ಮೈಲುಗಲ್ಲುಗಳು. ಹೀಗೆ ದಾಸ ಸಾಹಿತ್ಯ ಜಾನಪದ ಸಾಹಿತ್ಯಗಳಲ್ಲಿ ಬೆಟಗೇರಿಯವರ ದುಡಿತ, ಸಾಮರ್ಥ್ಯ, ಕಾಣಿಕೆಗಳು ಶಾಶ್ವತ.

ಸರ್ವತೋಮುಖವಾದ ಕಲ್ಯಾಣವನ್ನು ಅಪೇಕ್ಷಿಸುವ ಈ ರಸಋಷಿಯ ಪ್ರತಿಭೆಗೆ ಶಿಶು ಸಾಹಿತ್ಯವೂ ಗತಿಯನ್ನು ಕಂಡಿತೆಂದು ಹೇಳಿದರೆ ತಪ್ಪೇನೂ ಆಗಲಾರದು. ಏಕೆಂದರೆ ಶಿಶುಗಳ ಮನಸ್ಸಿನ ಶೀಲದ ಸ್ಥರವನ್ನು ಗಟ್ಟಿಗೊಳಿಸುವುದರಲ್ಲಿಯೇ ಭವಿಷ್ಯತ್ತು ಗಟ್ಟಿಯಾದ ವರ್ತಮಾನವಾಗುವುದರಲ್ಲಿ ಸಂದೇಹವಿಲ್ಲವೆಂಬುದನ್ನು ಅವರು ಗಟ್ಟಿಯಾಗಿಯೇ ನಂಬಿದ್ದರು. ಅಂತೆಯೇ ಅವರ ಪ್ರತಿಭಾಶ್ರೀಯ ಮಿಂಚಿನಲ್ಲಿ ಚಂದ್ರಹಾಸ, ಬಸವಣ್ಣನವರು, ಭೀಷ್ಮ, ಲವ-ಕುಶ ಮುಂತಾದ ಮಕ್ಕಳ ಮನಸ್ಸನ್ನು ಆಕರ್ಷಿಸುವ ಪುಸ್ತಕಗಳನ್ನು ಗೌರೀಶ ಪ್ರಕಟನಾಲಯದವರು ಸಾಹಿತ್ಯ ಭಂಡಾರದವರು ಪ್ರಕಟಿಸಿ ಕನ್ನಡ ಶಿಶುಲೋಕಕ್ಕೆ ಸಹಕಾರನೀಡಿ ಘನತೆಪಡೆದರು. ಇವುಗಳಂತೆ ಅವರ ಅನುವಾದ ಕೃತಿ ಮಧ್ಯಮವ್ಯಾಯೋಗವನ್ನೂ ಇಲ್ಲಿ ನೆನೆಯಬಹುದು.

ಹೀಗೆ ಸುಮಾರು 54 ಪುಸ್ತಕಗಳನ್ನು ಪ್ರಕಟಿಸಿದ್ದರೂ ಇನ್ನೂ ಅವರ ಹತ್ತಿರ ಅನೇಕ ಅಮೂಲ್ಯವಾದ ಅಪ್ರಕಟಿತ ಅವರ ಕೃತಿಗಳು ಇವೆ. ಅವುಗಳನ್ನೆಲ್ಲ ಸಾಹಿತ್ಯಪರಿಷತ್ತಾಗಲೀ, ವಿದ್ಯಾವರ್ಧಕ ಸಂಘವಾಗಲೀ, ವಿಶ್ವವಿದ್ಯಾಲಯಗಳಾಗಲೀ ಪ್ರಕಟಿಸಿ ಕನ್ನಡ ಸಾರಸ್ವತಲೋಕವನ್ನು ಉದ್ಧಾರಮಾಡಬೇಕಾದುದು ಅವರ ಕರ್ತವ್ಯ. ಅದರಿಂದ ಕವಿಯ ಆರಾಧನೆಯನ್ನು ನಿಜವಾದ ರೀತಿಯಲ್ಲಿ ಮಾಡಿ ಆತ್ಮಕ್ಕೆ ಸಂತೃಪ್ತಿಯನ್ನು ಎಸಗಿದಂತಾಗುತ್ತದೆ.

ಇಷ್ಟು ವಿಸ್ತಾರವಾದ ಜೀವನಾನುಭವದಿಂದ, ಸತ್ಯಸಂಶೋಧನೆಯನ್ನೆಸಗಿ, ಪ್ರಾಮಾಣಿಕತೆಯಿಂದ ಸೃಜನಶೀಲ ಸಾಹಿತ್ಯವನ್ನಾಗಲೀ ಸಂಶೋಧನಾತ್ಮಕ ಕೃತಿಗಳನ್ನಾಗಲೀ ನೀಡಿದ ಕವಿಶ್ರೇಷ್ಠರಿಗೆ, ಆಚಾರ್ಯರಿಗೆ ಜನತೆ ಕೊಟ್ಟದ್ದೇನು ?

ಸಿದ್ಧಗಂಗಾ

ಜನತೆ ಕೊಟ್ಟದ್ದು ತೀರ ಅಲ್ಪ-1938ರಲ್ಲಿ ಜಮಖಂಡಿಯ ಕವಿಸಮ್ಮೇಲನದ ಅಧ್ಯಕ್ಷತೆ, 1941ರಲ್ಲಿ ಹೈದರಾಬಾದ ಕರ್ನಾಟಕ ಸಾಹಿತ್ಯ ಸಮ್ಮೇಲನದಲ್ಲಿ ಬಹುಮಾನ, 1950ರಲ್ಲಿ ಹರಪನಹಳ್ಳಿಯ ಪ್ರಥಮ ಜನಪದ ಗೋಷ್ಠಿಯ ಅಧ್ಯಕ್ಷತೆ, 'ಮಗಳ ಮದುವೆ' ಕಾದಂಬರಿಗೆ 1951ರಲ್ಲಿ ಮುಂಬಯಿ ಸರಕಾರದಿಂದ ಎರಡು ಸಾವಿರ ರೂಪಾಯಿಗಳ ಬಹುಮಾನ, 1971ರಲ್ಲಿ ರಾಜ್ಯ ಸಾಹಿತ್ಯ ಅಕಾಡಮಿ ಪ್ರಶಸ್ತಿ ಮತ್ತು ನಾಗಮಂಗಲದಲ್ಲಿ ಜರುಗಿದ ಅಖಿಲಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷತೆ, 1973ರಲ್ಲಿ ಅಖಿಲ ಕರ್ನಾಟಕ ವೈದ್ಯಕೀಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷತೆ ಮತ್ತು ಧರ್ಮಸ್ಥಳದಲ್ಲಿ ಸಾಹಿತ್ಯಸಮ್ಮೇಲನದ ಅಧ್ಯಕ್ಷತೆ, 1974ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯವು ನೀಡಿದ ಡಾಕ್ಟರೇಟ ಪದವಿ–ಇವು ಎದ್ದುಕಾಣುವ ಕವಿಹೃದಯಕ್ಕೆ ತೃಪ್ತಿತಂದ ಕೆಲವು ಗೌರವದ ಘಟನೆಗಳು. ಆದರೆ ಅವರು ನೀಡಿದ ಅಪಾರ ಸಂಪತ್ತಿಗೆ, ಅವರು ಬಾಳಿದ ಸುಸಂಸ್ಕೃತ ಬದುಕಿಗೆ ಸಮಾಜ ಕೊಟ್ಟದ್ದು, ನಾಡುಕೊಟ್ಟದ್ದು, ರಾಷ್ಟ್ರಕೊಟ್ಟದ್ದು ಏನೂ ಇಲ್ಲವೆಂದರೂ ಅಡ್ಡಿಯಿಲ್ಲ. ಕನ್ನಡ ಸಾಹಿತ್ಯ ಪರಿಷತ್ತಾದರೂ ಅವರನ್ನು ಇನ್ನೂ ಚೆನ್ನಾಗಿ ಗುರುತಿಸಿ ಅನೇಕ ಸಲ ತಾನು ಏರ್ಪಡಿಸುತ್ತಿರುವ ಸಮ್ಮೇಲನಗಳಲ್ಲಿ ಅಧ್ಯಕ್ಷತೆಯ ಸನ್ಮಾನ ನೀಡಿ ಗೌರವಿಸಬೇಕಾಗಿತ್ತು. ಆದರೆ ಆ ಸಂಸ್ಥೆಗೆ ಇವರನ್ನು ಒಂದು ಸಲವಾದರೂ ಸಮ್ಮೇಲನಾಧ್ಯಕ್ಷರನ್ನಾಗಿ ಗೌರವಿಸುವ ಭಾಗ್ಯ ಬರಲಿಲ್ಲವಲ್ಲವೆಂದು ನಿಟ್ಟುಸಿರು ಬಿಡಬೇಕಾಗಿದೆ. ಆದರೆ ಅವರ ತಪಸ್ಸಿನ ಫಲ ನಾಡಿನ ಯಾವ ವಿಶ್ವವಿದ್ಯಾಲಯವೂ ಮಾಡಿ ಸಾಧಿಸಿದುದಕ್ಕಿಂತ ಮಿಗಿಲಾದುದಾಗಿದೆ. ಅವರ ತಪಸ್ಸಿನ ಫಲದ ಎಳ್ಳಷ್ಟನ್ನು ಮಾತ್ರ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆ ಪಡೆದು ಸ್ವಲ್ಪವಾದರೂ ಗೌರವ ಪಡೆಯಿತು. 1960ರಲ್ಲಿ ಈ ಕವಿಕಾವ್ಯಕೃತಿಗಳ ಬಗೆಗೆ ಬುರ್ಲಿ ಬಿಂದು-ಮಾಧವ ಮತ್ತು ಅನಂತತಡಸ ಅವರು "ಆನಂದಕಂದ" ಎಂಬ ಹೊತ್ತಿಗೆಯನ್ನೂ, 197೯ರಲ್ಲಿ "ಆನಂದಕಂದ–ಕವಿಕಾವ್ಯವಿಮರ್ಶೆ" ಎಂಬ ಪಿ.ಎಚ್.ಡಿ. ಪ್ರಬಂಧವನ್ನೂ ಡಾ|| ಎ. ಕೆ. ಕುಲಕರಣಿ ಅವರು ತಂದು ಕವಿಹೃದಯಕ್ಕೆ ನೆಮ್ಮದಿಯನ್ನುಂಟುಮಾಡಿದರಷ್ಟೆ ಅಲ್ಲ, ಆ ಸಮಾಧಾನ 1981 ಅಕ್ಟೋಬರ್‌ವರೆಗೆ ಅವರಲ್ಲಿ ಚೈತನ್ಯವನ್ನು ಕಾಪಾಡಿಕೊಂಡು ಬಂದಿತು.

1952ರಿಂದ ಮೊನ್ನೆ ಮೊನ್ನಿನವರೆಗೆ ನಾನು ಈ ಮಹಾ ಸಾಹಿತ್ಯ ತಪಸ್ವಿಯನ್ನು ಅವರ ತಪೋವನದಲ್ಲಿಯೇ ಧಾರವಾಡಕ್ಕೆ ಹೋದಾಗೊಮ್ಮೆ ಹತ್ತಾರು ಸಲ ಕಂಡಿದ್ದೇನೆ. ಪಾದಗಳಿಗೆ ಪೊಡಮಟ್ಟು, ಅವರ ಪವಿತ್ರ ಹಸ್ತಗಳಿಂದ ತಲೆಯಮೇಲೆ ಬೆನ್ನಮೇಲೆ ರಕ್ಷೆಯನ್ನಿಡಿಸಿಕೊಂಡಿದ್ದೇನೆ. ತಮ್ಮ ಮಗನೋಪಾದಿಯಲ್ಲಿ ಪಕ್ಕದಲ್ಲಿ ಕೂಡಿಸಿಕೊಂಡು ನನ್ನ ಮೈನೇವರಿಸಿ ಹತ್ತಾರು ವಿಷಯಗಳನ್ನು ಹೇಳಿದ್ದಾರೆ. ಒಂದೊಂದು ಭೆಟ್ಟಿಯಲ್ಲಿ ಒಂದೊಂದು ಬಗೆಯ ಹೊಸ ವಿಚಾರವನ್ನೇ ಹೇಳು

ತ್ತಿದ್ದುದು ನನಗೆ ಚಿರಸ್ಮರಣೀಯವಾಗಿದೆ. ಅವರಲ್ಲಿಗೆ ಹೋದಾಗಲೆಲ್ಲ ಹಿಂದಿನದನ್ನು ನೆನೆಸಿಕೊಳ್ಳುತ್ತಿದ್ದರು. ಕುಟುಂಬದ ಕ್ಷೇಮ ಸಮಾಚಾರವನ್ನೂ ಕೇಳುತ್ತಿದ್ದರು. ನನಗನ್ನಿಸಿದ ಮಟ್ಟಿಗೆ, ಕನ್ನಡ ಸಾಹಿತ್ಯ, ಇತಿಹಾಸ, ಸಂಸ್ಕೃತಿಗಳ ಬಗೆಗೆ ಜಂಗಮ ವಿಶ್ವವಿದ್ಯಾಲಯವೇ ಅವರು ಆಗಿದ್ದರು. ತಲೆಯಮೇಲೆ ಕೈಯಾಡಿಸಿ ಮಾತು ಆರಂಭಿಸಿದರೆ ಸಾಕು ಕನ್ನಡ ಸರಸ್ವತೀ ಭಂಡಾರದ ಮುದ್ರೆ ಒಡೆದುಹೋಗುವುದಷ್ಟೇ ಅಲ್ಲ, ಅದರಿಂದ ಹೊಸ ಹೊಸ ರತ್ನದ ಬೆಳಕನ್ನು ಹೊರತೆಗೆದು ನಾಡನ್ನು ಪುನೀತ ಗೊಳಿಸುತ್ತಿದ್ದರು. ನಿಸರ್ಗವು ಅವರಿಗೆ ಆರ್ಥಿಕ ಮುಗ್ಗಟ್ಟಿನ ಜೊತೆಗೆ ಆರೋಗ್ಯದ ಮುಗ್ಗಟ್ಟನ್ನು ಅವರ ಜೀವನದುದ್ದಕ್ಕೂ ತಂದೊಡ್ಡಿದ್ದರೂ ವಿಶೇಷತಃ ಪಾರ್ಶ್ವ ವಾಯು ಅವರನ್ನು ಹಿಂಡಿಹಿಪ್ಪಿಮಾಡಿದ್ದರೂ, 81ರ ಹರಯದಲ್ಲಿ 'ಕುಮಾರವ್ಯಾಸ ಭಾರತ'ವನ್ನು ಶಾಸ್ತ್ರೋಕ್ತ ಸಂಸ್ಕರಣ ಮಾಡಬೇಕೆಂಬ ಉತ್ಕಟ ಇಚ್ಛೆಯನ್ನು ಪೂಜ್ಯ ಎನ್ಕೆಯವರ ಎದುರು ವ್ಯಕ್ತಗೊಳಿಸಿದುದನ್ನು ನಾನು ಕಂಡಿದ್ದೇನೆ, ಕೇಳಿದ್ದೇನೆ. ಹುಬ್ಬಳ್ಳಿಯಲ್ಲಿಯ ಪುರಂದರದಾಸ, ಕನಕದಾಸ ಸೇವಾಸಮಿತಿಯವರೆಂದು ಕಾಣು ತ್ತದೆ; ಅವರು ಆನಂದಕಂದರ ಮನೆಗೆ (1980–81ರಲ್ಲಿ ಇರಬೇಕು) ಬಂದು ಶಾಲು ಹೊದಿಸಿ ಸನ್ಮಾನ ಮಾಡಿದ ಸಂದರ್ಭ. ಆಗ ನಾನೂ ಅಲ್ಲಿಯೇ ನನ್ನ ಸುದೈವ ದಿಂದ ಇದ್ದೆ. ಸನ್ಮಾನದ ನಂತರ ಅವರು "ಸಾವಿನಕ್ಕಿಂತ ನಾನು ಬಹುವೊಂಡ ನಿದ್ದೇನೆ. ಏಕೆ ಅದು ಅನೇಕರೀತಿಯಿಂದ ನನ್ನನ್ನು ಜೀವದಿಂದ ಇಟ್ಟೊ ನಾಲಗೆ ಕಸಗೊಂಡಿತು. ಕಾಲುಗಳನ್ನು ಕಸಗೊಂಡಿತು. ಬಲಗೈಯನ್ನು ಕಸಗೊಂಡಿತು. ಆದರೂ ನಾನಿನ್ನೂ ಬರೆಯುತ್ತೇನೆ. ನಾಲಗೆ ಕಡಿದುಹಾಕಿದರೂ ಬರೆಯುತ್ತೇನೆ" ಎಂದು ಕಣ್ಣುತುಂಬ ನೀರು ತಂದು ಹೇಳಿದರು. ಅದರ ಹಿಂದೆ ನೋವು ಇದೆ, ಎಂಥ ಆದೇಶವಿದೆ ಎಂಬುದನ್ನು ನಾವು ತಿಳಿದುಕೊಳ್ಳಬೇಕಾಗಿದೆ.

ಸಾವಿನೊಡನೆ ಅಖಂಡವಾಗಿ ಸೆಣಸಾಡಿದ ಆ ಧೀರರು ತಮ್ಮ ಕೊನೆಯ ಉಸಿ ರನ್ನು 26–10–82ರಂದು ಗೃಹಪ್ರವೇಶ ಮಾಡಿದ ಸ್ವಂತ ಮನೆ "ಆನಂದಕಂದ" ದಲ್ಲಿ ದಿನಾಂಕ 30–10–82ರಂದು ತೆಗೆದುಕೊಂಡುದು ಕೂಡ ಒಂದು ಪವಾಡ ವೇನೋ ಎನ್ನಿಸುತ್ತದೆ.

ಇಂತಹ ತಪಸ್ವಿಗಳು, ಜೀವನ ದ್ರಷ್ಟಾರರು ಲಕ್ಷಕ್ಕೊಬ್ಬರು ಲಭ್ಯವಾಗುವುದೂ ವಿರಳ. ಅಂತಹರ ಅಗ್ರಪಂಕ್ತಿಯಲ್ಲಿ ಆನಂದಕಂದರೆಂದು ಕಾವ್ಯನಾಮದಿಂದ ಖ್ಯಾತ ರಾಗಿದ್ದ ಕವಿಭೂಷಣರೆಂಬ ಬಿರುದಾಂಕಿತರಾಗಿದ್ದ ಡಾಕ್ಟರ್ ಬೆಟಗೇರಿ ಕೃಷ್ಣಶರ್ಮರು ಬರುತ್ತಾರೆ. ಅವರ ಪಾರ್ಥಿವ ಶರೀರ ಸೃಷ್ಟಿಯಲ್ಲಿ ಒಂದಾಗಿ ಇಂದು ನಮ್ಮ ಕಣ್ಣಿಗೆ ಕಾಣದಿದ್ದರೂ, ಅವರ ಸಾಹಿತ್ಯ ಚಿರಂಜೀವಿ. ಅವರ ನೆನಪು ಚಿರಂಜೀವಿ.

ಸಿದ್ಧಗಂಗಾ

ಶುಭ್ರಖಾದಿ ಧೋತ್ರವನ್ನು ತೀಡಿ ತೀಡಿ ನಿಲುಗೆ ಹಾಕಿ ಉಟ್ಟುಕೊಂಡು, ಶುಭ್ರಖಾದಿಯ ಕಣ್ಣುಕುಕ್ಕಿಸುವ ಷರ್ಟನ್ನು ತೊಟ್ಟು, ಶುಭ್ರಖಾದಿಯ ಶಾಲನ್ನು ಹೊದ್ದು, ಕೈಯಲ್ಲಿ ಒಂದು ಬಡಿಗೆಯನ್ನೋ, ಛತ್ರಿಯನ್ನೋ ಹಿಡಿದು ಹೊರಟಿರುವ ಚಿತ್ರ, ಇಲ್ಲವೆ ಜಯಂತಿ ಕಛೇರಿಯಲ್ಲಿ ಬಡಿಗೆಯನ್ನು ಮೂಲೆಗಿಟ್ಟ ಕುರ್ಚಿಯಮೇಲೆ ಕುಳಿತು ಕನ್ನಡಕದಲ್ಲಿ ಕನ್ನಡವನ್ನೇ ಹಿಡಿದಿಟ್ಟು ಕೆಲಸ ಮಾಡುತ್ತ ಕುಳಿತ ಚಿತ್ರ ಅವರನ್ನು ನೋಡಿದವರ ಸ್ಮೃತಿಪಟಲದಿಂದ ಮಾಸುವಂತಿಲ್ಲ. ಈಗಲೂ, ಯಾವಾಗಲೂ, ಈ ಕನ್ನಡ ರಸಋಷಿಯು,

“ಎನಿತು ಇನಿದು ಈ ಕನ್ನಡ ನುಡಿಯು
ಮನವನು ತಣಿಸುವ ಮೋಹನ ಸುಧೆಯು ;
ಗಾನವ ಬೆರೆಯಿಸಿ
ವೀಣೆಯ ದನಿಯೊಳು
ವಾಣಿಯನೇವುರ
ನುಡಿಸುತೆ ಕುಣಿಯಲು
ಮಾಣದೆ ಮೆರೆಯುವ ಮಂಜುಲರವವೊ ?
ಎನಿತು ಇನಿದು ಈ ಕನ್ನಡ ನುಡಿಯು ;
ರಂಗನ ಮುರಲಿಯ
ಹಿಂಗದ ಸರದಲಿ
ಹೆಂಗಳೆಯರು ಬೆಳ
ದಿಂಗಳಿನಿರುಳಲಿ
ಸಂಗೀತವನೊರೆದಂಗ ವಿದೇನೋ ?
ಎನಿತು ಇನಿದು ಈ ಕನ್ನಡ ನುಡಿಯು ;
ಗಿಳಿಗಳು ಉಲಿಯುವ
ಮೆಲುಮಾತುಗಳೋ ?
ಕಳಕಂಠಗಳಾ
ಚೆಲುವಿನ ಕುಕಿಲೊ ?
ಅಳಿಗಳ ಬಳಗದ ಬೆಳಗಿನ ಉಲಿಯೋ ?
ಎನಿತು ಇನಿದು ಈ ಕನ್ನಡ ನುಡಿಯು ;”

ಎಂಬ ಹಾಡನ್ನು ಹಾಡುತ್ತಿರುವಂತೆ, ಕನ್ನಡ ತಾಯಿ ಮಗನ ಮಾತಿಗೆ ಮನಸೋತು ಆಲಿಸುತ್ತಿದ್ದಂತೆ ಭಾಸವಾಗುತ್ತದೆ. ಇಂತಹ ಕವಿಪುಂಗವನಿಗೆ ಇದೋ ನಮ್ಮ ನಮನ.

ಅಷ್ಟಕ್ಕೇ ಆ ಯುವಕನಿಗೆ ಕೋಪ ಬಂತು. "ನಿನಗೆ Manners ಇದೆಯಾ? Customers ಜೊತೆ ಹೇಗೆ behave ಮಾಡಬೇಕೂಂತ ಗೊತ್ತಾಗೊಲ್ಲ! Stupid....ಎಂದನು. ಪಾಪ, ಆ ದೇಸೀಯ ವ್ಯಾಪಾರಿಗೆ ಈ ನಾಗರಿಕ ಯುವಕನ ಕಂ-ಇಂಗ್ಲೀಷ್ ಎಷ್ಟು ಅರ್ಥವಾಯ್ತೋ ಗೊತ್ತಿಲ್ಲ. ಬಂದ ಗಿರಾಕಿಗಳೆಲ್ಲಾ ಹೀಗೇ ಮಾತನಾಡತೊಡಗಿದರೆ ಕೆಲವೇ ದಿನಗಳಲ್ಲಿ ಆ ಮುದುಕನೂ ಕೂಡ ತನಗೆ ತಿಳಿಯಲಿ, ಬಿಡಲಿ ಅಂಥವೇ ಕಲಬೆರಕೆ ಭಾಷೆ ಕಲಿತು ಅವರಿಗೇ ಒಪ್ಪಿಸಿಬಿಡುತ್ತಾನೆ. ಪರಿಣಾಮ?

ಇದಲ್ಲದೆ ಇನ್ನೊಂದು ವಿಚಾರವೂ ಭಾಷಾಭಿಮಾನಿಗಳ ನಿದ್ರೆಕೆಡಿಸಿದೆ. ನಮ್ಮ ನಮ್ಮ ಮಾತಿಗೆ ಕಸುವನ್ನು, ಬರವಣಿಗೆಗೆ ಒಂದು ವಿಶಿಷ್ಟಗತ್ತನ್ನು ಒದಗಿಸಿದ ನಮ್ಮ ಭಾಷೆಯ ದೇಶೀಯತೆ ನಾವು ಬಳಸುತ್ತಿರುವ ಭಾಷೆಯಿಂದ ಕಣ್ಮರೆಯಾಗುತ್ತಿದೆ. ಒಂದು ಭಾಷೆಯ ಸ್ವಂತಿಕೆ, ದೇಶೀಯತೆ ವ್ಯಕ್ತವಾಗುವುದು ಅದರ ನುಡಿಕಟ್ಟು, ನಾಣ್ಣುಡಿ, ವಾಗ್ರೂಢಿ, ಜೋಡುನುಡಿ, ಪಡೆಮಾತುಗಳಲ್ಲಿ. ಭಾಷೆಯ ಸೊಗಸು, ಅರ್ಥವಂತಿಕೆಗೆ ಅವು ಪೋಷಕ. ಜನತೆ ತಮ್ಮ ಅನಿಸುವಿಕೆಗಳನ್ನು ವಿಚಾರಗಳನ್ನು ಅನುಭವಗಳನ್ನು ಸಮರ್ಥವಾಗಿ, ಪರಿಣಾಮಕಾರಿಯಾಗಿ ವ್ಯಕ್ತಪಡಿಸಲು ಇವು ಉತ್ಕೃಷ್ಟ ಸಾಧನಗಳು. ದೇಶೀಯ ಸೊಗಡಿನ ಕನ್ನಡದವೇ ಆದ ಇಂಥ ನುಡಿಕಟ್ಟು ಗಳು ಲೋಕೋಕ್ತಿಗಳು, ಸಾಮತಿ, ಜಾಣ್ಣುಡಿಗಳು ಇಂದಿನ ನಮ್ಮ ವ್ಯಾವಹಾರಿಕ ಭಾಷೆಯಲ್ಲಿ ಕಾಣಸಿಗದು. ನವನಾಗರಿಕತೆಯ ಸೋಗು ಹಾಕಿಕೊಂಡು ಚಾಲ್ತಿಯಲ್ಲಿ ರುವ ಭಾಷೆ—ನಮ್ಮ ನುಡಿಯಲ್ಲಿರುವ ಸಾರವನ್ನು, ಸತ್ವಗಳನ್ನು ಕಾಡ ಬೆಳದಿಂಗಳಾ ಗಿಸುತ್ತದೆ. ದೈನಂದಿನದ ವ್ಯವಹಾರದಲ್ಲಿ ಕಾಣಸಿಗದ ಈ ಅಪೂರ್ವ ಸಂಪತ್ತು ಬರವಣಿಗೆಯಿಂದಲೂ ತಪ್ಪಿಹೋಗುವ ಅಪಾಯವಿದೆ. ಬಳಕೆ ತಪ್ಪಿದ ನುಡಿಕಟ್ಟುಗಳು ಸಾಮತಿಗಳು ಕ್ರಮೇಣ ಅರ್ಥ ಕಳೆದುಕೊಳ್ಳುತ್ತವೆ; ಮಹತ್ವವನ್ನು ನೀಗಿಕೊಳ್ಳು ತ್ತವೆ. ಅವುಗಳ ನಿಜವಾದ ಅರ್ಥವೇ ಕ್ರಮೇಣ ತಿಳಿಯದೇ ಹೋಗುವ ಸಾಧ್ಯತೆಯೂ ಉಂಟಾಗಬಹುದು.

ನಗರಜೀವನದ ಯಾಂತ್ರಿಕತೆಗೆ ಸಿಕ್ಕಿ, ನವನಾಗರೀಕತೆಯ ಮಾಂತ್ರಿಕತೆಗೆ ಮಾರು ಹೋಗಿ ಆಡಂಬರದ ಜೀವನ ನಡೆಸುವ ನಾಗರಿಕರಿಗೆ ತಮ್ಮ ಭಾಷೆಯ ದೇಶಿಯತೆಯನ್ನು ಕಂಡುಕೊಂಡು ಬಳಸುವ ವ್ಯವಧಾನವೇ ಇಲ್ಲವಾಗಿದೆ. ಬಹು ಭಾಷಾಜ್ಞಾನ ನಾಗರಿಕ ಲಕ್ಷಣವೆಂಬ ಭ್ರಮೆ ಬೇರೆ. ಅಚ್ಚಗನ್ನಡದಲ್ಲಿ ಮಾತನಾ ಡುವುದೆಂದರೆ ಶುದ್ಧ ಹಳ್ಳಿಗನೆಂಬ ಕೀಳರಿಮೆಯೂ ಅವರಿಗೆ ಇದ್ದೀತು. ಹೋಗಲಿ, ಹಳ್ಳಿಗಳಲ್ಲಾದರೂ ಜನಪದದಲ್ಲಿ ಕನ್ನಡತನ ಉಳಿದಿದೆ ಎಂದು ಹೇಳಲು ಧೈರ್ಯ ಸಾಲದು. ಅವರೂ ಕೂಡ ಸಾಕಷ್ಟು ಸುಧಾರಿಸುತ್ತಿದ್ದಾರೆ. ಹೊಸತರಾ ಮಾತಾಡ ಲಾರಂಭಿಸಿದ್ದಾರೆ. ಕನ್ನಡ ಭಾಷೆಯ ವೈಶಿಷ್ಟ್ಯಕ್ಕೆ ಕಾರಣವಾದ ಪ್ರಾಂತೀಯ ಭೇಧ ಗಳೂ ಹೋಗುತ್ತಿವೆ. ಕರಾವಳಿ, ಉತ್ತರ ಕರ್ನಾಟಕ, ಹೈದರಾಬಾದು ಕರ್ನಾಟಕ

ಮೈಸೂರು, ಮಲೆನಾಡು, ಬಯಲುಸೀಮೆಗಳಲ್ಲಿ ಬಳಸುತ್ತಿದ್ದ ಪ್ರಾದೇಶಿಕ ಭಾಷೆಯ ಗಮ್ಮತ್ತು ಅಳಿಯುತ್ತಿದೆ. ಕನ್ನಡ ದೇಶೀಯ ಸೊಲ್ಲಿನಲ್ಲಿ ಎಂಥ ಬನಿ, ಸೊಗಡು ಇರುತ್ತದೆ. ಆಡುನುಡಿಯಲ್ಲಿ ಎಂಥ ಕಸುವು ಇರುತ್ತದೆ ಎಂಬುದನ್ನು ನುಡಿದು ತೋರಿಸುವ ತಿರುಳ್ಗನ್ನಡದ ಜನ ನಮಗಿಂದು ಸಿಕ್ಕುವುದು ಕಷ್ಟ. ಎಚ್ಚೆತ್ತುಕೊಳ್ಳದಿದ್ದರೆ ನಮ್ಮ ತಾಯಿನುಡಿಯನ್ನು ಬೆಳೆಸುವ ಮಾತಿರಲಿ, ಉಳಿಸಲೂ ಸಾಧ್ಯವಾಗದ ದ್ರೋಹಿಗಳು ನಾವಾಗುತ್ತೇವೆ.

ಮಾತೃಭಾಷೆಯ ಬಗ್ಗೆ ಪ್ರೀತಿ, ಅದನ್ನು ಉಳಿಸಿ ಬೆಳೆಸಬೇಕೆಂಬ ಪ್ರಜ್ಞೆ ಕಾನೂನಿನಿಂದ, ಒತ್ತಾಯದಿಂದ ಮಾಡುವಂಥದ್ದಲ್ಲ. ಅದನ್ನು ಆಡುವ ಜನರ ಹೃದಯದಲ್ಲಿ ಅದು ಮೂಡಬೇಕು. ನಮ್ಮ ತಾಯ್ನುಡಿಯು ಸಾರವತ್ತಾದ ಸ್ವಂತಿಕೆ ಮೂಲೆಗುಂಪಾಗದಂತೆ ಅದು ಕಾಲೋಚಿತವಾಗಿ ಮತ್ತಷ್ಟು ಸತ್ವಪೂರ್ಣವಾಗುವಂತೆ ಮಾಡುವ ನೈತಿಕ ಹೊಣೆ ಈ ನೆಲ ಜಲಗಳಿಗೆ ಬದ್ಧರಾದ ನಮ್ಮದು ಎಂಬ ಕರ್ತವ್ಯ ಪ್ರಜ್ಞೆ ಮೂಡಬೇಕು. ಇದು ಭಾಷಾಭಿಮಾನದ ಮಾತು, ಭಾಷಾಂಧತೆಯಲ್ಲ. ●

[ಆಕಾಶವಾಣಿ ಕೃಪೆ]

## ದೀಪ ನಕ್ಕಿತು!

ಕತ್ತಲೆಗೆ ನೋಡು! ಬಲುಜಂಬ!
ತಾನೇ ಬಲು ದೊಡ್ಡವನು
ತನಗೇ ಎಲ್ಲರೂ ಅಂಜುವರು ;
ಎಂದು, ಎಲ್ಲಕಡೆ ನುಗ್ಗುತಿತ್ತು.
ನುಗ್ಗುತ್ತ, ನುಗುತ್ತ,
ದೀಪ ಒಂದನು ಕಂಡು,
ದೀಪ ಕಣ್ಮಿಟುಕಿಸಿಲು!
ಹೇಳದೇ, ಕೇಳದೇ
ಕಂಬಿ ಕಿತ್ತಿತು ಕತ್ತಲೆ!
ದೀಪ ನಕ್ಕಿತು ಆಗಲೆ!!

—ಶಾರದಾ. ಜಡೆ

(10ನೇ ಪುಟದಿಂದ)

**ಡಾ|| ಗೊರೂರು ರಾಮಸ್ವಾಮಿ ಐಯ್ಯಂಗಾರ್‌ರವರು ಮುಖ್ಯ ಅಥಿತಿಗಳಾಗಿ ಮಾಡಿದ ಭಾಷಣ:—**

ಬಂಧು ಭಗಿನಿಯರೇ ಈ ಕ್ಷೇತ್ರದ ಅಧಿದೇವತೆಗಳೇ ಆದ ಡಾ|| ಶ್ರೀ ಶಿವಕುಮಾರ ಸ್ವಾಮಿಗಳವರೇ—ಶ್ರೀಸ್ವಾಮಿಗಳವರಿಗೆ ಡಾಕ್ಟರೇಟ್ ಬೇಕೇಇಲ್ಲ. ನಮ್ಮಂತಹವರಿಗೆ ಡಾಕ್ಟರೇಟ್ ಬೇಕು, ನಾವು ಡಾಕ್ಟರ್ ಅಲ್ಲವೇ ಅಲ್ಲ. ಶ್ರೀ ಸ್ವಾಮೀಜಿಯವರು ಎಲ್ಲ ಭವರೋಗಗಳಿಗೆ ಔಷಧಿ ಕೊಡತಕ್ಕಂತಹವರು. ಅವರಿಗೆ ಈ ಡಾಕ್ಟರೇಟ್ ಬೇಕಾಗಿರಲಿಲ್ಲ. ಶ್ರೀ ಸ್ವಾಮಿಗಳಿಗೆ ಡಾಕ್ಟರೇಟ್ ಕೊಟ್ಟದ್ದರಿಂದ ಅದು ಆ ಡಾಕ್ಟರೇಟಿಗೆ ಒಂದು ಭೂಷಣ ಬಂತು. ನಮಗೆಲ್ಲಾ ಸ್ವಲ್ಪ ಸಂತೋಷ ದಾಯಿತು. ನಾವು ತೆಗೆದುಕೊಂಡಿರುವ ಡಾಕ್ಟರೇಟ್ ಶಿವಕುಮಾರಸ್ವಾಮಿಗಳು ತೆಗೆದುಕೊಂಡಿರುವ ಡಾಕ್ಟರೇಟ್ ಅಂತ.

ನನ್ನ ಪರಮ ಮಿತ್ರರಾದ ಡಾ|| ಸಿದ್ಧಯ್ಯ ಪುರಾಣಿಕರವರೇ ಇದು ಬಹಳ ಸೊಗಸಾಗಿರುವಂತಹ ಸಮಾರಂಭ. ಇದನ್ನು ನೋಡಿದರೆ ನನಗೆ ಎಷ್ಟೋ ಆನಂದ ವಾಗುತ್ತದೆ. ನಾವು ದೇವಲೋಕದ ಸಭೆಗಳನ್ನು ನೋಡಿಲ್ಲ. ಇದೆಯೋ ಇಲ್ಲವೋ ಗೊತ್ತಿಲ್ಲ. ಇಂಥ ಸಂಸ್ಥೆಗಳು ಇರುವ ಜಾಗದಲ್ಲಿ ದೇವಲೋಕ ಇದೆ ಅಂತ ಭಾವಿ ಸ್ತೇವೆ. ದೇವಲೋಕದ ಸಭೆ ಇದ್ದಿದ್ರೆ ಯಾವರೀತಿಯಾಗಿ ಇರಬಹುದಾಗಿತ್ತು ಎಂದು ಒಂದು ಅಂದಾಜು ಮಾಡಿಕೊಂಡರೆ ಇಂತಹ ಒಂದು ಗಂಭೀರವಾದ ಸಭೆ ನನ್ನ ಜ್ಞಾಪಕಕ್ಕೆ ಬರುತ್ತದೆ, ಮತ್ತು ಇದೊಂದು ನಿಜವಾದ ಗುರುಕುಲವೇ ಆಗಿದೆ. ಕಾಳಿದಾಸನು ಶಾಕುಂತಲ ನಾಟಕವನ್ನು ಬರೆದಾಗ್ಗೆ, ಅಲ್ಲಿ ಕಣ್ವ ಮಹರ್ಷಿಗಳನ್ನು ಹೇಳುವಾಗ್ಗೆ ಹತ್ತುಸಾವಿರ ವಿದ್ಯಾರ್ಥಿಗಳಿದ್ದರೆ ಒಬ್ಬ ಕುಲಪತಿಗಳಾಗ್ತಾರೆಂದು ಹೇಳಿದಾನೆ, ಎಂಬುದಾಗಿ ವ್ಯಾಖ್ಯಾನಕಾರರು ಹೇಳುತ್ತಾರೆ. ಕುಲಪತಿಗಳು, ಅಂದರೆ ಹತ್ತುಸಾವಿರ ವಿದ್ಯಾರ್ಥಿಗಳಿರಬೇಕು ಅಂತ— ಆಗಿನ ಕಾಲಕ್ಕೆ ಅದು ಅದ್ಭುತವಾಗೇ ಕಾಣ್ತಾ ಇತ್ತು. ಪ್ರಜಾಸಂಖ್ಯೆ ಇಷ್ಟೊಂದು ಬೆಳೆದಿರಲಿಲ್ಲ. ಸಣ್ಣಪುಟ್ಟ ರಾಜ್ಯಗಳೂ ಇದ್ದವು. ಆಗ ಅದು ಹತ್ತುಸಾವಿರ ಅಂದರೆ ದೊಡ್ಡ ಪ್ರಜಾಸಂಖ್ಯೆಯಾಗಿ ಕಾಣ್ತಾ ಇತ್ತು. ಇವತ್ತಿನ ದಿವಸ ಸ್ವಾಮಿಗಳು ನಡೆಸುತ್ತಿರುವ ಎಲ್ಲಾ ಸಂಸ್ಥೆಗಳ ಲೆಕ್ಕ ತೆಗೆದುಕೊಂಡರೆ ಹತ್ತುಸಾವಿರ ಯಾಕೆ ಇನ್ನೂ ಜಾಸ್ತಿಯಾಗುತ್ತದೆ. ಇಂತಹ ದೊಡ್ಡ ಸಂಸ್ಥೆಯನ್ನು ನಡೆಸುತ್ತಿರುವಾಗ್ಗೆ, ನನಗೆ ಇದು ಒಂದು ಕುಲಪತಿಗಳ ಸಂಸ್ಥೆ ಎನ್ನುವ ಮನೋಭಾವ ಬಂತು. ಇಲ್ಲಿರುವ ವಿದ್ಯಾರ್ಥಿಗಳು ಶಿಸ್ತು ಸಂಯಮ ಇದನ್ನೆಲ್ಲಾ ಎಷ್ಟೋಸಲ ನಾನು ಕೇಳಿಯೂ ಇದ್ದೆ. ಈ ಸಂಸ್ಥೆಯ ಹೆಸರು ಎಲ್ಲಾ ಕಡೆಯಲ್ಲಿಯೂ ಪ್ರಸಿದ್ಧವಾಗಿಯೂ ಇದೆ, ಒಂದು ಸರಕಾರ ನಡೆಸುವಷ್ಟು ಕಾರ್ಯ

ಕ್ರಮವನ್ನು ಈ ಸಂಸ್ಥೆಯಲ್ಲಿ ಸ್ವಾಮೀಜಿಯವರು ಕುಳಿತುಕೊಂಡು ಪರಮಹಂಸ ಪರಿವ್ರಾಜಕಾಚಾರ್ಯರಾಗಿ ಇದ್ದು ದೇವಸಭೆಯಾಗಿ ಕಾಣ್ತಾ ಇದೆ. ಅಂದರೆ ಅಲ್ಲಿ ಇಂದ್ರ ಇರಬಹುದು, ಅದೇನು ಅಷ್ಟು ದೊಡ್ಡದಲ್ಲ. ಈಗಿನ ಕಾಲಕ್ಕೆ ಇಂದ್ರಭೋಗ ಎಲ್ಲಾ ದೇಶಗಳಲ್ಲಿಯೂ ತಾಂಡವವಾಡ್ತಾ ಇದೆ, ಎನ್ನುವಷ್ಟರಮಟ್ಟಿಗೆ ಐಶ್ವರ್ಯವೂ ಹಣದ ಉಬ್ಬರವೂ ತಾಂತ್ರಿಕ ಸೌಕರ್ಯವೂ ಎಲ್ಲಾ ದೇಶಗಳಲ್ಲಿಯೂ ಇಂದ್ರ ಲೋಕದಲ್ಲಿ ಇರೋಹಾಗೆ ಕಾಣ್ತಾ ಇದೆ.ಆದರೆ ಆಧ್ಯಾತ್ಮಿಕ ತಳಹದಿಯ ಮೇಲೆ ಒಂದು ಸಂಸ್ಥೆ ನಡೀತಾ ಇರೋದು, ಇದು ಪರಮಹಂಸಪರಿವ್ರಾಜಕ ಸಭೆ ಎನ್ನುವ ಹಾಗೆ ನನ್ನ ಬುದ್ಧಿಗೆ ತೋರ್ತಾ ಇದೆ. ಈ ಸ್ಥಳಕ್ಕೆ ಇವತ್ತು ಬಂದು ತಮಗೆಲ್ಲಾ ಗೊತ್ತಿದೆ, ಈ ಸಂಸ್ಥೆಯ ವಿಚಾರವನ್ನೆಲ್ಲಾ ನಾನು ಏತಕ್ಕೆ ಹೇಳಲಿಕ್ಕೆ ಹೋಗ್ಲಿ ಆದರೆ ಸ್ವಾಮೀಜಿಯವರಿಗೆ ನನ್ನ ಪ್ರೀತಿಯನ್ನ ಅರ್ಪಿಸೋದಕ್ಕೆ ಈ ಒಂದು ನಾಲ್ಕು ಮಾತು ಅವಶ್ಯಕ ಅಂತ ಹೇಳಿದ್ದೇನೆ. ಇಂತಹ ಸಂಸ್ಥೆಯನ್ನ ನಡೆಸ್ತಾ ಸ್ವಾಮೀಜಿ ಯವರು ದೇಶಕ್ಕೆಲ್ಲಾ ಆದರ್ಶಪ್ರಾಯರಾಗಿದ್ದಾರೆ ಅಂತ ನಾನು ಇಷ್ಟನ್ನು ಮಾತ್ರ ಹೇಳಬಲ್ಲೆ. (ಮುಂದುವರಿಯುತ್ತದೆ)

## ಸಿರಿಸಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ

ಈ ಬಾರಿಯ ೫೫ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಉತ್ತರ ಕನ್ನಡ ಜಿಲ್ಲೆಯ ಕೇಂದ್ರಸ್ಥಳವಾದ ಸಿರಸಿಯಲ್ಲಿ ಡಿಸೆಂಬರ್ ೨೩ ರಿಂದ ೨೬ರ ವರೆಗೆ ನಡೆಯಲಿದೆ.

ಸಮ್ಮೇಳನದ ಅಂಗವಾಗಿ ಪುಸ್ತಕ ಪ್ರದರ್ಶನ, ಚಿತ್ರಕಲಾ ಪ್ರದರ್ಶನ ಗಳು ಹಾಗೂ ನಾಲ್ಕು ದಿನ ಆಕರ್ಷಕ ಮನರಂಜನಾ ಕಾರ್ಯಕ್ರಮ ಗಳನ್ನು ವ್ಯವಸ್ಥೆ ಮಾಡಲಾಗಿದೆ.

ಪ್ರತಿನಿಧಿಗಳಾಗಬಯಸುವವರು ಊಟ, ವಸತಿ ಹಾಗೂ ಪ್ರತಿನಿಧಿ ಶುಲ್ಕ ಸೇರಿ ಇಪ್ಪತ್ತೈದು(25-00)ರೂಪಾಯಿಗಳನ್ನು

"ಸ್ವಾಗತ ಸಮಿತಿ", ಅಖಿಲ ಭಾರತ 55ನೆಯ ಕನ್ನಡ ಸಾಹಿತ್ಯ ಸಮ್ಮೇಳನ ಕಛೇರಿ, ಅರ್ಬನ್ ಬ್ಯಾಂಕ್ ಕಟ್ಟಡ, ಸಿರಸಿ,
ಉತ್ತರ ಕನ್ನಡ 581401.

ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಲಾಗಿದೆ.

# ಶ್ರದ್ಧಾಂಜಲಿ

ಹಂತಕನ ಸಂಚು ಬುದ್ಧಿಜೀವಿಗಳ ಲೋಕದಲ್ಲಿ ಈ ವರ್ಷ ವಿಪರೀತವಾಗಿ ನಡೆದಿದೆ. ಅನೇಕ ಬುದ್ಧಿ ಜೀವಿಗಳನ್ನು ಬಲಿ ತೆಗೆದುಕೊಂಡಿದೆ.

ದಿ : 30–10–82ರಂದು ಕನ್ನಡ ಸಾಹಿತ್ಯ ಸಂಸ್ಕೃತಿ ಸಂಪದಿಂದ ಪರಿಪೂರ್ಣ ವ್ಯಕ್ತಿತ್ವವನ್ನು ಸಂಪಾದಿಸಿಕೊಂಡ ಯಶಸ್ವಿ ಪತ್ರಿಕಾ ಸಂಪಾದಕರೂ ಸಂಘಟನಾಶೀಲರೂ ಎನಿಸಿದ 'ಆನಂದಕಂದ' ಎಂಬ ಕಾವ್ಯ ನಾಮದಿಂದ ಪ್ರಸಿದ್ಧರಾಗಿದ್ದ ಶ್ರೀ ಬೇಟಗೇರಿ ಕೃಷ್ಣಶರ್ಮರವರು ಇಹಲೋಕ ವ್ಯಾಪಾರವನ್ನು ಮುಗಿಸಿದುದು ಕನ್ನಡ ಸಾರಸ್ವತ ಲೋಕಕ್ಕೊಂದು ಬರಬಂದಂತಾಗಿದೆ.

ದಿ : 7-11–82ರಂದು ಸಮಾಜದ ಅಂಕುಡೊಂಕುಗಳನ್ನು ಧ್ವನಿಸುವ ತಮ್ಮ ಸಾವಿರಾರು ಚುಟುಕುಗಳಿಂದ 'ಚುಟುಕು ಲೋಕದ ಬ್ರಹ್ಮರಾದ' ದಿನಕರ ದೇಸಾಯಿ ಕನ್ನಡ ಜನತೆಯನ್ನು ಅಗಲಿದುದು ಕನ್ನಡಿಗರ ದೌರ್ಭಾಗ್ಯ.

ದಿ : 8-11–82ರಂದು ವಯೋವೃದ್ಧರೂ, ಜ್ಞಾನವೃದ್ಧರೂ, ನೆಲದ ಮರೆಯ ನಿಧಾನದಂತೆ ಸುಂದರ ಶರಣ ಶ್ರೀಮಂತ ಬದುಕನ್ನು ಸಾಗಿಸಿ ತುಂಬು ಬಾಳನ್ನು ಕಂಡ ಕಂಬಾಳು ಮಠದ ಪಟ್ಟದ ಚನ್ನವೀರ ಸ್ವಾಮಿಗಳು ಲಿಂಗದಲ್ಲಿ ಬೆರತು ಹೋದುದು ಸಮಾಜಕ್ಕೊಂದು ಭರಿಸಲಾರದ ಹಾನಿ.

ದಿ : 15–11–82ರಂದು ಅನುಭವ ರಾಜಕಾರಣಿಗಳು ಸಶಕ್ತ ಸಮಾಜ ಧುರೀಣರೂ ಕೇಂದ್ರ ಮತ್ತು ರಾಜ್ಯದ ಮಾಜಿ ಮಂತ್ರಿಗಳಾದ ಶ್ರೀ ಕೊಂಡಜ್ಜಿ ಬಸಪ್ಪನವರ ನಿಧನದಿಂದ ದೇಶಕ್ಕೊಂದು ಅಪಾರ ನಷ್ಟ ಉಂಟಾಗಿದೆ.

ದಿ : 15–11–82ರಂದು ಭರತ ಖಂಡದ ಸಾಧು ಸಜ್ಜನ ಸಂಪತ್ತನ್ನು ಮೈಗೂಡಿಸಿಕೊಂಡ ಮಹಾನ್ ಸಂತ, ಭೂದಾನ ಚಳುವಳಿ ಸೃಷ್ಟಿಕರ್ತ, ಆಚಾರ್ಯ ಶ್ರೀ ವಿನೋಬಾಭಾವೆ ದೇಹತ್ಯಾಗ ಮಾಡಿದುದರಿಂದ ಭಾರತಾಂಬೆ ಸುಪುತ್ರನೋರ್ವನನ್ನು ಕಳೆದುಕೊಂಡು ದುಃಖಿಸುವಂತಾಗಿದೆ.

ದಿ : 22–11–82ರಂದು ಸುಪ್ರಸಿದ್ಧ ದಾನಿಗಳು, ಸಮಾಜದ ಮುಖಂಡರೂ ಶ್ರೀಮಠದ ಮತ್ತು ಶ್ರೀಗಳವರ ಪರಮ ಭಕ್ತರೂ ಆದ ಹಾಸನ ತಾಲ್ಲೂಕು ಬಾಳ್ಳುಪೇಟೆಯ ಕಾಫಿ ಬೆಳೆಗಾರರಾದ ದಿ|| ಬಸಪ್ಪಗೌಡರ ಧರ್ಮಪತ್ನಿ ಶ್ರೀಮತಿ ಮಲ್ಲಿಗಮ್ಮನವರು ಮತ್ತು ಅವರ ಪುತ್ರ ಶ್ರೀ ಮಲ್ಲಪ್ಪ ಗೌಡರು ಆಕಸ್ಮಿಕದಿಂದ ದೈವಾಧೀನರಾದುದು ವಿಷಾದನೀಯ.

ಈ ಮೃತರ ಎಲ್ಲ ಆತ್ಮಗಳಿಗೆ ಚಿರಶಾಂತಿಯನ್ನು ಕೋರಿ 'ಸಿದ್ಧಗಂಗಾ' ಶ್ರದ್ಧಾಂಜಲಿಯನ್ನು ಸಮರ್ಪಿಸುತ್ತದೆ.

## ಕೃಷಿ ಬದುಕಿಗೆ ಹೊಸ ಚಾಲನೆ

# ಕರ್ನಾಟಕದ ದೃಢ ಯೋಜನೆ

[illegible] ರೈತರು ಮತ್ತು ಕೃಷಿ ಕಾರ್ಮಿಕರ ಅಭ್ಯುದಯ [illegible]. ಕರ್ನಾಟಕ [illegible] ದೃಢಪಡಿಸಿದೆ.

## ನೇಗಿಲು ಭಾಗ್ಯ :

ಕ್ರಾಂತಿಕಾರಿ ಭೂ ಸುಧಾರಣೆ ಶಾಸನವನ್ನು [illegible] ರಾಜ್ಯ. ಕರ್ನಾಟಕ. [illegible] "ನೇಗಿಲು ಭಾಗ್ಯ" ಯೋಜನೆಯನ್ನು ಜಾರಿಗೆ ತಂದಿದೆ. 1.81 ಲಕ್ಷ ಗೇಣಿದಾರರು [illegible]. ಅವರಿಗೆ 2.62 ಲಕ್ಷ ಎಕರೆ ಭೂಮಿಯನ್ನು [illegible].

## ರೈತರಿಗೆ ರಿಯಾಯಿತಿ :

* ತಕಾವಿ ಸಾಲ ರದ್ದು.
* ಹತ್ತು ಎಕರೆವರೆಗೆ ಖುಷ್ಕಿ ಭೂಮಿಗೆ ಭೂ ಕಂದಾಯ ವಜಾ.
* ಕಬ್ಬು ಖರೀದಿ ತೆರಿಗೆಯಲ್ಲಿ ಪ್ರತಿ ಟನ್ನಿಗೆ 6ರೂ. 80ಪೈಸೆ ರಿಯಾಯಿತಿ.
* ಕೃಷಿ ಉತ್ಪನ್ನಗಳಿಗೆ ನ್ಯಾಯವಾದ ಬೆಂಬಲ ಬೆಲೆ.
* ಆಯ್ದ ಜಿಲ್ಲೆಗಳಲ್ಲಿ ಬೆಳೆ ವಿಮಾ ಯೋಜನೆ ಜಾರಿ.
* ನೀರಾವರಿ ಪಂಪುಸೆಟ್ಟುಗಳಿಗೆ 5 ಅಶ್ವಶಕ್ತಿಯವರೆಗೆ ಪ್ರತಿ ಅಶ್ವಶಕ್ತಿಗೆ ಕೇವಲ 50ರೂ. ವಿದ್ಯುತ್ ಶುಲ್ಕ. 5 ಅಶ್ವಶಕ್ತಿಗೂ ಹೆಚ್ಚಿನ ಪಂಪುಸೆಟ್ಟುಗಳಿಗೆ ಕೊಡಬೇಕಾದ ವಿದ್ಯುಚ್ಛಕ್ತಿ ದರವನ್ನು ಪ್ರತಿ ಯೂನಿಟ್ಟಿಗೆ 22 ಪೈಸೆಯಿಂದ 17ಪೈಸೆಗೆ ಇಳಿಸಿದೆ.
* ನೀರಾವರಿ ಪ್ಲಾಂಟೇಷನ್ ಮತ್ತು ವಾಣಿಜ್ಯ ಬೆಳೆಗಳ ಹೊರತು ಉಳಿದ ಬೆಳೆಗಳ ಮೇಲಿನ ಕೃಷಿ ವರಮಾನ ತೆರಿಗೆ ವಜಾ.
* ಅತಿ ಸಣ್ಣ ರೈತರಿಗೆ ಶೇಕಡಾ 4ರ ಬಡ್ಡಿ ದರದಲ್ಲಿ ಸಾಲ ನೀಡಿಕೆ. ಅವಧಿಯೊಳಗಾಗಿ ಸಾಲ ಮರುಪಾವತಿ ಮಾಡಿದವರಿಗೆ ಸುಸ್ತಿ ಬಡ್ಡಿ ಮನ್ನಾ.
* ನೀರಾವರಿ ಪ್ರದೇಶದಲ್ಲಿ ಅಭಿವೃದ್ಧಿ ತೆರಿಗೆಯನ್ನು ರದ್ದುಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. ಈ ಮಧ್ಯೆ ಬಾಕಿ ವಸೂಲಿಯನ್ನು ತಡೆ ಹಿಡಿಯಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಲಾಗಿದೆ.
* ನೀರು ಕಂದಾಯ ದರವನ್ನು ಪುನರ್ ವಿಮರ್ಶಿಸಲಾಗಿದ್ದು 1.7.76ರಲ್ಲಿದ್ದ ದರದಲ್ಲೇ ನೀರು ಕಂದಾಯ ವಸೂಲು ಮಾಡಲು ಆದೇಶ ನೀಡಲಾಗಿದೆ.
* ರಸಗೊಬ್ಬರ, ಬಿತ್ತನೆ ಬೀಜ ಮುಂತಾದ ಕೃಷಿ ಸಾಧನಗಳ ಮೇಲಿನ ತೆರಿಗೆ ಇಳಿತ.
* ಕೃಷಿ ಕಾರ್ಮಿಕರಿಗೆ ವರ್ಷ ಪೂರ್ತಿ ಉದ್ಯೋಗ ನೀಡಿಕೆ.
* ಕೃಷಿ ಕಾರ್ಮಿಕರ ವೇತನ ಪುನರ್ವಿಮರ್ಶೆ. ಹೆಚ್ಚು ವೇತನ ನೀಡಿಕೆ.

ಪ್ರಕಟಣೆ : ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ.

